ಪ್ರಕಟನೆಯ ೨೮ ನೆಯ ವರ್ಷ : ೧೯೯೩

# ಸಂಕ್ರಮಣ

೨೫೪

---

ಅಸಗರ ವಜೀಹತ
**ಎಲ್ಲಕ್ಕಿಂತ ಅಗ್ಗದ ಮಾಂಸ: ನಾಟಕ**

ಟಿ. ಆರ್. ಚಂದ್ರಶೇಖರ
**ಜೆ. ಪಿ. ಶೌತನ್‌ರವರ 'ಅನುಭಾವಿಗಳ ಕ್ರಾಂತಿ'**

ಗೌ. ಮ. ಉಮಾಪತಿ ಶಾಸ್ತ್ರಿ
**'ಕಪ್ಪೆ ಅರಭಟ್ಟನ್': ಪದ ನಿರ್ವಚನ**

ಡಾ. ಪಂಚಾಕ್ಷರಿ ಹಿರೇಮಠ
**ಮುನಿ ರೂಪಚಂದ ಅವರ ಮುಕ್ತಕಗಳು**

ಡಾ ಪ್ರಹ್ಲಾದ ಮುದಗಲ್ಲ
**ಕನ್ನಡ–ಮರಾಠಿ**

ಕಮಲ ಹೆಮ್ಮಿಗೆ, ಹಿ. ಮ. ಗುರುಬಸವರಾಜ, ಶಿವರಾಮಯ್ಯ,
ಹನುಮಂತ ಪಾಟೀಲ, ಲೀಲಾ ಕಲಕೋಟಿ, ಡಿ. ಎನ್. ಅಕ್ಕಿ,
ಪಿ. ಮಂಜುನಾಥ, ಜಿ. ಪರಮೇಶ್ವರ ಕತ್ತಿಗೆ
ಜೆ. ಕೆ. ಶ್ರೀನಿವಾಸರಾವ್ ಇವರ ಕವನಗಳು

---

ಸಂಪುಟ ೨೮: ಸಂಚಿಕೆ ೧೦ ಅಕ್ಟೋಬರ ೧೯೯೩

# ಸಂಕ್ರಮಣ

ಅಕ್ಟೋಬರ ೧೯೯೩
ಸಂಪುಟ ೨೮ : ಸಂಚಿಕೆ ೧೦

ಸಂಪಾದಕಿ
ನೀಲಾ ಪಾಟೀಲ
ಸಲಹಾ ಸಂಪಾದಕ
ಚಂದ್ರಶೇಖರ ಪಾಟೀಲ



## ಕವನಗಳು



**SANKRAMANA 254**
A Monthly in Kannada
October, 1993 Vol. XXVIII No. 10
Sankramana Prakashana Dharwad-580 001 Phone : 40509
Printed at Chandana Mudrana, Dharwad-8 Phone : 44863
Annual Subscription : Rs. 50/-

# ಎಲ್ಲಕ್ಕಿಂತ ಅಗ್ಗದ ಮಾಂಸ

## ಅಸಗರ ವಜೀಹತ

(ಮೌಲವಿ ಸಾಹೇಬರು ಮತ್ತು ಪಂಡಿತರು ಇಬ್ಬರೂ ಬೇಸರದಲ್ಲಿ ಕುಳಿತಿದ್ದಾರೆ)

**ಪಂಡಿತ** ಮೌಲವಿ ಸಾಹೇಬರೇ ಏಕೇ ಬೇಸರದಲ್ಲಿದ್ದೀರಿ ?

**ಮೌಲವಿ** ಪಂಡಿತರೇ ನೀವು ಏಕೆ ಬೇಸರದಲ್ಲಿದ್ದೀರಿ ?

**ಪಂಡಿತ** ನಮ್ಮನ್ನು ಯಾರೂ ಕೇಳುವವರಿಲ್ಲ, ಅಣ್ಣಾ.

**ಮೌಲವಿ** ಕಾಲ ಕೆಟ್ಟು ಹೋಗಿದೆ, ಅಣ್ಣಾ. ಮಸೀದಿಗೆ ಬರುವವರೇ ಇಲ್ಲ. ಇದೇ ಪರಿಸ್ಥಿತಿ ಮುಂದುವರಿದರೆ ನಾವು ಎಲ್ಲಿಯಾದರೂ ಗೂಡಂಗಡಿ ಇಡುವುದೇ ಸೈ. ಆದರೆ...

**ಪಂಡಿತ** ಇಷ್ಟು ಕಹಿ ಮಾತು ಬೇಡ, ಮೌಲವಿ...... ಎಲ್ಲಿ ಗೂಡಂಗಡಿ, ಎಲ್ಲಿ ನಾವು... ... ಹಿಂದೆ ನಮಗೆ ಗೃಹಸ್ಥರು ಬಂದು ಕೊಟ್ಟು ಹೋಗುತ್ತಿದ್ದರು.

**ಮೌಲವಿ** ನಮಗೂ ಚೇಲರು ಬಂದು ಕೊಡುತ್ತಿದ್ದರು,

**ಇಬ್ಬರೂ** ಅಯ್ಯೋ ಈಗ ಯಾರೂ ಕೊಡುವವರಿಲ್ಲ.

(ಗಟ್ಟಿಯಾಗಿ ಹೇಳಿಕೊಂಡು ಅಳುತ್ತಾರೆ.)

(ಒಬ್ಬ ಹಿಂದು ಮುಖಂಡ, ಮತ್ತು ಒಬ್ಬ ಮುಸ್ಲಿಂ ಮುಖಂಡ ಬರುತ್ತಾರೆ ಅವರನ್ನು ಕಂಡು ಮೌಲವಿ, ಪಂಡಿತರು ಮೂಲೆಯಲ್ಲಿ ಕುಳಿತುಕೊಳ್ಳುತ್ತಾರೆ)

**ಮುಸ್ಲಿಂ ಮುಖಂಡ** ಚಿಟಕಿ ಹಾಕುವಷ್ಟರಲ್ಲಿ ಸಮಯ ಕಳೆದು ಹೋಯಿತು. ಕೆಲಸ ಮಾತ್ರ ಒಂದೂ ಆಗಿಲ್ಲ.

**ಹಿಂದು ಮುಖಂಡ** ಕೆಲಸ ಒಂದೂ ಆಗಿಲ್ಲ, ಆದ್ರೆ ಮತ್ತೆ ಚುನಾವಣೆ ಮೈ ಮೇಲೆ ಬಂದಾಯ್ತು.

ಮು. ಮು. ಈ ಬಾರಿ ಚುನಾವಣೆಯಲ್ಲಿ ಸೋತರೆ ಏನಾಗುತ್ತೋ ?

ಹಿ. ಮು. ಮತ್ತೆ ಅದೇ ಚಪ್ಪಲಿ ಏಟು ತಿನ್ನುವುದು !

ಮು. ಮು. ಹೀಗೆನ್ನಬೇಡಿ, ಪಂಡಿತರೆ, ಎದೆ ನಡುಗುತ್ತೆ.

ಹಿ. ಮು. ನನಗೂ ಎದೆ ನಡುಗುತ್ತೆ.

ಮು. ಮು. ಲೇ ನೀನು ಹಿಂದಿ ಮಾತನಾಡುತ್ತಿದ್ದೀಯಾ. ಹಿಂದಿ ಮಾತನಾಡು ವವರೆಂದರೆ ನನಗೆ ತಿರಸ್ಕಾರ.

ಹಿ. ಮು. ಲೇ ನೀನು ಉರ್ದು-ತುರುಕರ ಭಾಷೆ-ಮಾತನಾಡುತ್ತಿದ್ದೀಯಾ. ನನಗೆ ತುರುಕರನ್ನು ಕಂಡರೆ ಆಗುವುದಿಲ್ಲ.

ಮು. ಮು. ಲೇ ನಾನು ಹಿಂದುಗಳನ್ನು ಕೊಂದು ಹಾಕುತ್ತೇನೆ.

ಹಿ. ಮು. ಲೇ ನಾನು ತುರಕರನ್ನು ಕತ್ತರಿಸಿ ಹಾಕುತ್ತೇನೆ.

ಮು. ಮು. ನಮ್ಮ ಕಡೆ ಮುಸ್ಲಿಮರೇ ಹೆಚ್ಚು. ಆದರೆ ಎಲ್ಲರಿಗೂ ನನ್ನನ್ನು ಕಂಡರೆ ಸಿಟ್ಟು.

ಹಿ. ಮು. ನನ್ನ ಚುನಾವಣಾ ಕ್ಷೇತ್ರದಲ್ಲೂ ಹಾಗೆ ಹಿಂದುಗಳು ಹೆಚ್ಚು, ಆದರೆ ಎಲ್ಲರಿಗೂ ನನ್ನ ಕಂಡರೆ ತಿರಸ್ಕಾರ.

ಇಬ್ಬರೂ ಆದರೆ ನಾವು ಮುಖಂಡರು. ತಾವು ತಿರಸ್ಕಾರವನ್ನು ಪ್ರೀತಿಯಲ್ಲಿ ಬದಲಾಯಿಸಬಲ್ಲೆವು, (ತಡೆದು) ನಿನ್ನೆಯವರೆಗೆ ಯಾರು ನಮ್ಮನ್ನು ತಿರಸ್ಕರಿಸುತ್ತಿದ್ದರೋ ಅವರೇ ನಾಳೆ ನಮ್ಮನ್ನು ಪ್ರೀತಿಸುತ್ತಾರೆ. ಏಕೆಂದರೆ ನಾವು ಅವರಿಗೆ ಪರಿಹಾರ ಸಾಮಗ್ರಿ ಹಂಚುತ್ತೇವೆ.

ಮು.ಮು. ಅಲ್ಲಾ...ಹೋ...ಅಕ್ಬರ್...

ಹಿ. ಮು. ಹರಹರ ಮಹದೇವ್...

(ಮೌಲವಿ, ಪಂಡಿತ ಇಬ್ಬರೂ ಓಡುತ್ತಾ ಬರುತ್ತಾರೆ. ಮೌಲವಿ ಮುಸ್ಲಿಂ ಮುಖಂಡನ ಬಳಿ, ಪಂಡಿತ ಹಿಂದೂ ಮುಖಂಡನ ಬಳಿ.)

ಮೌಲವಿ ನನಗೂ ಸ್ವಲ್ಪ ಕೊಡಿ, ಜನಾಬೇ ಆಲಿ.

ಪಂಡಿತ ಸ್ವಾಮಿ, ನನ್ನಿಂದಲೂ ಸ್ವಲ್ಪ ಕೆಲಸ ತೆಗೆದುಕೊಳ್ಳಿರಿ.

ಇಬ್ಬರು ಮುಖಂಡರು ಏಳಿರಿ, ಧರ್ಮದ ಗುತ್ತೇದಾರರೇ, ದ್ವೇಷವನ್ನು ಪ್ರೇಮ ವಾಗಿ ಬದಲಿಸಿ. ನಾವು ನಿಮಗೆ ಊಟ ಹಾಕುತ್ತೇವೆ. ಬಟ್ಟೆ ಕೊಡುತ್ತೇವೆ.

ಮೌಲವಿ (ಆವೇಶದಿಂದ ಭಾಷಣ ಮಾಡುವಂತೆ) ನನ್ನ ಸರೀಕ ಮುಸಲ್ಮಾನರೇ, ನೀವು ಉರಿಯುತ್ತಿರುವ ಲಾವಾರಸ-ನೀವು ಬೆಂಕಿಯ ಸಮುದ್ರ-ಆವೇಶದ ತೂಫಾನ್. ನೀವು ಇಸ್ಲಾಂನ ನಿಜವಾದ ಸಿಪಾಯಿಗಳು. ಕಾಫಿರ ಹಿಂದು ಗಳನ್ನು, ಮಣ್ಣುಪಾಲು ಮಾಡಿರಿ-ಅಲ್ಲಾಹೋ ಅಕ್ಬರ... ...

ಪಂಡಿತ (ಆವೇಶದಿಂದ) ಹಿಂದುಗಳ ರಕ್ಷಕರೆ, ಆರ್ಯಾವರ್ತದ ಉತ್ತರಾಧಿಕಾರಿಗಳೇ, ಏಳಿರಿ ಎದ್ದೇಳಿರಿ–ನಿಮ್ಮ ಮಸ್ತಕದಿಂದ ಕಲಂಕವನ್ನು ತೊಡೆದು ಹಾಕಿರಿ. ಅಪವಿತ್ರ ಮ್ಲೇಚ್ಛ ಮುಸಲ್ಮಾನರನ್ನು ಈ ಪುಣ್ಯ ಭೂಮಿಯಿಂದ ಹೊರಗೆ ದಬ್ಬಿರಿ. ಏಕೆಂದರೆ ಅವರು ತಮಗೆಂದೇ ಪಾಕಿಸ್ತಾನ ಮಾಡಿಕೊಂಡಿದ್ದಾರೆ. (ರಂಗದ ಮೇಲೆ ಇಬ್ಬರು ಬಂಡವಾಳಶಾಹಿಗಳು ಬರುತ್ತಾರೆ ಒಬ್ಬ ಮುಸ್ಲಿಂ ಒಬ್ಬ ಹಿಂದು)

ಮುಸ್ಲಿಂ ಬಂಡವಾಳಶಾಹಿ ಏನು ಕತ್ತಲೆ ಕಟ್ಟಿತಾ-

ಹಿಂದೂ ಬಂಡವಾಳಶಾಹಿ ಕತ್ತಲೆ ಕಟ್ಟಿತಾ? ರಂಡೆಮಕ್ಕಳು! ಕಾರ್ಮಿಕರ ಏಕತೆ ಜಿಂದಾಬಾದ್ ಎನ್ನುತ್ತಾರೆ.

ಮು. ಬಂ. ಅದರ ಮೇಲೆ ಡಿಮಾಂಡ ನೋಟಿಸು, ಕೆಲಸ ನಿಧಾನ, ಮಂತ್ರಿಗೆ, ಧರಣಿ, ಚಳವಳಿ...

ಹಿ. ಬಂ. ಕಾರ್ಮಿಕರ ಏಕತೆ ಜಿಂದಾಬಾದ್ ಆದ್ರೆ ನಮ್ಮ ಗತಿ ಏನು ? ನಮ್ಮ ಫ್ಯಾಕ್ಟರಿಗಳು ಬಂದ್ ಆಗುತ್ತವೆ.

ಮು. ಬಂ. ಅವರೆ ಹಿಂದು ಮುಸ್ಲಿಂ ಏಕತೆ ಆಗದಿದ್ದರೆ... ...

ಹಿ. ಬಂ. ನಮಗೆ ಆರಾಮು!

ಮು. ಬಂ. ಹಾಗಿದ್ದರೆ ವಿಚಾರ ಮಾಡುವಾ.

ಹಿ. ಬ. ಸರಿ, ವಿಚಾರ ಮಾಡುವಾ.

(ತಕ್ಷಣ ಹಿಂದು ಮುಸ್ಲಿಂ ಮುಖಂಡರು ಎದ್ದು ನಿಲ್ಲುತ್ತಾರೆ.)

ಹಿಂದು ಮುಖಂಡ ನಿಮ್ಮ ಕೆಲಸ ನಾವು ಮಾಡುತ್ತೇವೆ.

ಮುಸ್ಲಿಂ ಮುಖಂಡ ಕಾರ್ಮಿಕರ ಕತೆ ಮುಂಡಾಮುಚ್ಚುತ್ತೆ.

ಹಿ. ಮು. ಹಿಂದುಗಳ ಏಕತೆ ಚಿರಾಯುವಾಗುತ್ತೆ.

ಮು. ಮು. ಮುಸ್ಲಿಂ ರ ಏಕತೆ ಜಿಂದಾಬಾದ್!

ಹಿ. ಬಂ. ನಾವು ರೆಡಿ.

ಮು. ಬಂ. ನಾವು ತಯಾರ್.

ಹಿ. ಮು. ಆದರೆ ಹಣ ಖರ್ಚಾಗುತ್ತೆ.

ಮು. ಬಂ. ಎಷ್ಟು ಬೇಕು ತಗೊಳಿ ಹಣ. ಇದರಿಂದ ನಮ್ಮ ಚರಕ ನಡೆಯುತ್ತೆ. (ರಂಗದಲ್ಲಿ ಇಬ್ಬರು ಗೂಂಡಾಗಳು ಅಟ್ಟಹಾಸ ಮಾಡುತ್ತಾ ಬರುತ್ತಾರೆ.)

ಗೂಂಡಾ ೧ ಮಿಣಿಮಿಣಿ ಮಾತಾಡಿದರಷ್ಟೆ ಕೆಲಸ ಆಗುವುದಿಲ್ಲ, ಮುಲ್ಲಾಜೀ, ಪಂಡಿತಜೀ, ಬೆಂಕಿ ನಾವು ಹಾಕುತ್ತೇವೆ. ಗುಂಡು ನಾವು ಹಾರಿಸುತ್ತೇವೆ, ಎಸಿಡ್ ಬಾಟಲಿ ನಾವು ಎಸೆಯುತ್ತೇವೆ, ಮಕ್ಕಳ ಕಾಲು ಮುರಿದು ಬೆಂಕಿಗೆ ಬಿಸಾಡುತ್ತೇವೆ.

ಗೂಂಡಾ ೨ ಹೆಂಗಸರ ಎದೆಗಳನ್ನು ಯಾರು ಕತ್ತರಿಸುವುದು ? ನಾವೇ, ಮುದುಕರ ಹೊಟ್ಟೆ ಯಾರು ಸೀಳುತ್ತಾರೆ ? ಹೆಂಗಸರು ಮಕ್ಕಳನ್ನು ಯಾರು ಜೀವಂತ ಸುಡುತ್ತಾರೆ ? ನಾವೇ. ಕೆಲವೊಮ್ಮೆ ಸಮವಸ್ತ್ರ ಹಾಕಿಕೊಂಡು, ಕೆಲವೊಮ್ಮೆ ಹಾಕಿಕೊಳ್ಳದೇ ಮತ್ತೆ ಮತ್ತೆ ಯಾರು ಬರುತ್ತಾರೆ ? ಕೇಳಿ ಮುಖಂಡರೇ, ನಮ್ಮನ್ನು ಕೇಳಿ. ನಾವೇ …

ಹಿಂದು,ಮುಸ್ಲಿಂ ಮುಖಂಡರು ಬನ್ನಿ ವೀರರೇ, ಬನ್ನಿ.

ಹಿ. ಮು. ನೀವು ನಮ್ಮ ಅಸ್ತ್ರಗಳು ವೀರರೇ.

ಮು. ಮು, ನೀವು ನಮ್ಮ ತಲವಾರ್ ಧೀರರೇ,

ಹಿ. ಮು. ಆದರೆ ಏನು ಮಾಡೋಣಾ ?

ಮು. ಮು. ಅದೇ ಹಳೆಯ ಉಪಾಯ.

ಹಿ. ಮು. ಏನು ?

ಮು. ಮು. ದನದ ಮಾಂಸ !

ಹಿ. ಮು. ರಾಮ ರಾಮ ! (ಸ್ವಲ್ಪ ತಡೆದು) ಹ್ಞಾ ಹಂದಿ ಮಾಂಸ !

ಮು. ಮು. ಯಾ ಖುದಾ ಯಾ ಖುದಾ !

ಗೂಂಡಾ ಇದೇ ಸರಿಯಾದ ಉಪಾಯ, ಮತ್ತೂ ನೂರಕ್ಕೆ ನೂರು ಸರಿಯಾದುದು ! (ಇನ್ನೊಬ್ಬ ಗೂಂಡಾನೊಡನೆ) ಹೋಗೋ, ತೆಗೆದುಕೊಂಡು ಬಾ.

(ಎರಡನೆ ಗೂಂಡಾ ಹೋಗುತ್ತಾನೆ)

ಮು. ಮು. ಮತ್ತೆ ನಾನು ಚಂದಾ ಒಟ್ಟು ಮಾಡುತ್ತೇನೆ. ಗಲಭೆಯಲ್ಲಿ ಸತ್ತ ಮುಸಲ್ಮಾನರಿಗೆ ಫಾತೇಹಾ ಮಾಡುತ್ತೇನೆ.

ಮೌಲವಿ ಫಾತೇಹಾ ನಾನು ಮಾಡುತ್ತೇನೆ

ಮು, ಮು, ಖಂಡಿತವಾಗಿಯೂ, ಖಂಡಿತವಾಗಿಯೂ ಫಾತೇಹಾ ನೀವಲ್ಲದೇ ಮತ್ಯಾರು ಮಾಡುತ್ತಾರೆ ಮೌಲವಿ ಸಾಹೇಬರೇ ?

ಹಿ. ಮು. ನಾನೂ ಚಂದಾ ಹಣ ಒಟ್ಟು ಮಾಡುತ್ತೇನೆ, ಮತ್ತೆ ಯಜ್ಞ ಮಾಡಬೇಕು.

ಪಂಡಿತ ಯಜ್ಞ ನಾನು ಮಾಡುತ್ತೇನೆ.

ಹಿ. ಮು. ಹ್ಞಾ ಹ್ಞಾ ಪಂಡಿತರೇ.....ನೀವು ಮಾಡುತ್ತೀರಿ.

ಹಿಂದು ಮತ್ತು ಮುಸ್ಲಿಂ ಮುಖಂಡರು ವ್ಹಾ ವ್ಹಾ ! ಚಂದಾ, ಪರಿಹಾರ ಕಾರ್ಯಕ್ರಮ, ಲೂಟಿ, ದೊಂಬಿ, ಅಧಿಕಾರಿಗಳ ಓಡಾಟ. ಸಹಾನುಭೂಮಿಯ ಎರಡು ಶಬ್ದಗಳಿಂದ ಎಲ್ಲರ ಹೃದಯವನ್ನು ಗೆದ್ದು ಬಿಡುತ್ತೇವೆ!!!

ಎಲ್ಲರೂ (ಸ್ವಲ್ಪ ತಡೆದು) ದ್ವೇಷ ಪ್ರೀತಿಯಾಗಿ ಪರಿವರ್ತನೆಯಾಗುವುದು !!!

(ಗೂಂಡಾ ೨—ಎರಡು ಪೊಟ್ಟಣಗಳನ್ನು ತೆಗೆದುಕೊಂಡು ಬರುತ್ತಾನೆ. ಒಂದನ್ನು ಮೌಲವಿಗೆ, ಇನ್ನೊಂದನ್ನು ಪಂಡಿತನಿಗೆ ಕೊಡುತ್ತಾನೆ.)

ಪಂಡಿತ ಈ ಪೊಟ್ಟಣದಲ್ಲಿ ಏನಿದೆ ಸಹೋದರ?

ಗೂಂಡಾ ೨ ದನದ ಮಾಂಸ.

ಪಂಡಿತ ರಾಮ ರಾಮ! (ಪೊಟ್ಟಣ ಕೈ ಬಿಡುವನು)

ಮೌಲವಿ ಈ ಪಟ್ಟಣದಲ್ಲಿ ಏನಿದೆ ಭಾಯೀ?

ಗೂಂಡಾ ೨ ಹಂದಿ ಮಾಂಸ.

ಮೌಲವಿ ಯಾ ಖುದಾ ಯಾ ಖುದಾ! (ಪೊಟ್ಟಣ ಕೈ ಬಿಡುವನು.)

ಹಿ. ಮು. ಪಂಡಿತರೇ ಇಷ್ಟಕ್ಕೇ ಹೀಗೆ ಅಷ್ಟು ಭಯಪಟ್ಟರೆ ಕೆಲಸ ಆಗುವದಿಲ್ಲ, ನೀವು ಆ ದನದ ಮಾಂಸವನ್ನು ತೆಗೆದುಕೊಂಡು ಹೋಗಿ ನಿಮ್ಮ ದೇವಸ್ಥಾನದ ಜಗಲಿಯ ಮೇಲೆ ಎಸೆಯಿರಿ. ನಿಮ್ಮ ಮೇಲೆ ಯಾರು ಅನುಮಾನ ಪಡುತ್ತಾರೆ?

ಮು. ಮು. ಮೌಲವಿ ಸಾಹೇಬರೇ, ನೀವು ಈ ಹಂದಿ ಮಾಂಸ ಕೊಂಡು ಹೋಗಿ ಮಸೀದಿಯಲ್ಲಿ ಹಾಕಿರಿ. ನಿಮ್ಮ ಮೇಲೆ ಯಾರಿಗೆ ತಾನೆ ಅನುಮಾನ ಬರುತ್ತೆ?

(ಮೌಲವಿ ಮತ್ತು ಪಂಡಿತರು ಒಂದು ಕ್ಷಣ ಯೋಚಿಸಿ ಪೊಟ್ಟಣಗಳನ್ನು ಎತ್ತಿಕೊಳ್ಳುತ್ತಾರೆ. ರಂಗದಲ್ಲಿ ಎಲ್ಲರೂ ಹೋಗುತ್ತಾರೆ. ನಂತರ ಬೇರೆ ಬೇರೆ ದಿಕ್ಕಿನಿಂದ ಹಿಂದು ಮುಸ್ಲಿಂ ಎರಡು ಗುಂಪು ಬರುತ್ತವೆ. ಹಿಂದು ಗುಂಪಿನ ಮುಂದೆ ಪಂಡಿತ, ಹಿಂದು ಮುಖಂಡ, ಗೂಂಡಾ ಹಾಗೂ ಮುಸ್ಲಿಂ ಗುಂಪಿನ ಮುಂದೆ ಮೌಲವಿ, ಮುಸ್ಲಿಂ ಮುಖಂಡ, ಗೂಂಡಾ ಇರುತ್ತಾರೆ.)

ಹಿ.ಮು ಹರ ಹರ ಮಹದೇವ ಕೀ ಜಯ್!!

ಮು.ಮು. ನಾರ್ ಏ ತಕಬೀರೆ ಅಲ್ಲಾ ಹೋ ಅಕಬರ್!!

ಮು.ಮು ನಮ್ಮ ಮಸೀದಿಯಲ್ಲಿ ಹಂದಿ ಮಾಂಸವನ್ನು ಹಿಂದುಗಳು ಎಸೆದಿದ್ದಾರೆ!

ಹಿ.ಮು. ಮುಸಲ್ಮಾನರು ನಮ್ಮ ದೇವಸ್ಥಾನದಲ್ಲಿ ದನದ ಮಾಂಸ ಎಸೆದಿದ್ದಾರೆ!!

ಎರಡೂ ಗುಂಪಿನವರು ಹರಹರ ಮಹಾದೇವ, ಅಲ್ಲಾ ಹೋ ಅಕಬರ...
ಹಿಡಿ ... ... ... ಕೊಲ್ಲು, ಬಡಿ ... ... ... ಹಾಕು ... ...

(ಆಕಸ್ಮಿಕವಾಗಿ ಒಬ್ಬ ಮನುಷ್ಯ ಗುಂಪಿನ ನಡುವಿಂದ ಬರುತ್ತಾನೆ)

**ಮನುಷ್ಯ** ನಿಲ್ಲಿರಿ, ನನ್ನ ಮಾತನ್ನು ಕೇಳಿ. ತಡೆಯಿರಿ, ಗಲಭೆ ಮಾಡಲೆಂದೇ ನೀವೆಲ್ಲ ತಯಾರಾಗಿಯೇ ಬಂದಿದ್ದೀರಾ ? ಪೋಲಿಸರನ್ನು, ನಿಮ್ಮ ಮುಖಂಡರನ್ನು ದೂರ ಆ ಮರದ ಕೆಳಗೆ ನಿಲ್ಲಿಸಿಯೇ ಬಂದಿದ್ದೀರಾ ? ಸ್ನೇಹಿತರೆ, ನನ್ನ ಮಾತನ್ನು ದಯವಿಟ್ಟು ಕೇಳಿ. ನೀವು ಹೇಳುವ ದನದ ಅಥವಾ ಹಂದಿ ಮಾಂಸ ಎಲ್ಲಿದೆ? ನಾನು ನೋಡುತ್ತೇನೆ.

(ಅವನ ಎದುರು ಎರಡು ಪೊಟ್ಟಣ ಬೀಳುತ್ತವೆ. ಆತ ಅದನ್ನು ಬಾಗಿ ನೋಡುತ್ತಾನೆ) ಸ್ನೇಹಿತರೇ ಇದು ದನದ ಮಾಂಸವೂ ಅಲ್ಲ. ಹಂದಿಯ ಮಾಂಸವೂ ಅಲ್ಲ. ಇದು ಮನುಷ್ಯನ ಮಾಂಸ ! (ಜನ ಬೆಚ್ಚಿ ಬೀಳುತ್ತಾರೆ.)

**ಜನರು** ಹ್ಞಾ ಮನುಷ್ಯನ ಮಾಂಸ !

**ಕೆಲವರು** ಇಲ್ಲ, ಇದು ಹೇಗೆ ಸಾಧ್ಯ ?

**ಮನುಷ್ಯ** ಹ್ಞಾ ಇದನ್ನು ನೋಡಿ, ಬಣ್ಣ ನೋಡಿ, ಎಳೆಗಳನ್ನು ನೋಡಿ. ಎಲ್ಲಾದರೂ ದನ ಅಥವ ಹಂದಿಯ ಮಾಂಸ ಹೀಗೆ ಇರುತ್ತದೆಯೇ ? ಇದು ಮನುಷ್ಯರ ಮಾಂಸವೇ ಸರಿ !

**ಹಿಂದು ಮುಸ್ಲಿಂ ಮುಖಂಡರು** ಇಲ್ಲ, ನೀನು ಸುಳ್ಳು ಹೇಳುತ್ತಿದ್ದೀಯಾ.

**ಮನುಷ್ಯ** ನಾನು ಸುಳ್ಳು ಯಾಕೆ ಹೇಳಲಿ ? ನೀವು ನಿಮ್ಮನ್ನೇ ನೋಡಿಕೊಳ್ಳಿ. ಇದರಲ್ಲಿ ದನದ ಮಾಂಸದಲ್ಲಿರುವಂತೆ ದೊಡ್ಡ ಎಳೆಗಳಿಲ್ಲ. ಇದರ ಬಣ್ಣ ಕೆಂಪು ಮತ್ತು ನೋಡಿ, ಇದರಲ್ಲಿ ನೆಣವೇ ಇಲ್ಲ. ಸ್ನೇಹಿತರೇ, ಇವು ಇಬ್ಬರು ಮನುಷ್ಯರ ಮಾಂಸ.

**ಕೆಲವು ಸ್ವರಗಳು** (ಶೀತಲ ಸ್ವರದಲ್ಲಿ) ಮನುಷ್ಯರ ಮಾಂಸ ... ...

**ಹಿ. ಮು.** ಆರ್ಯಾವರ್ತದ ವೀರರೇ, ಹೋಗೋಣ, ಅದು ಮನುಷ್ಯನ ಮಾಂಸ ...

**ಮು. ಮು.** ಇಸ್ಲಾಂ ಧೀರರೇ, ಇದು ಹಂದಿಯದಲ್ಲ, ಮನುಷ್ಯನ ಮಾಂಸ ...

**ಗೂಂಡಾ** ಮನುಷ್ಯನ ಮಾಂಸ ... ... ಛೀ .... ಛೀ ... ...

(ಎಲ್ಲರೂ ಪಶ್ಚಾತ್ತಾಪದಿಂದ ಹೊರಟು ಹೋಗುತ್ತಾರೆ)

ಹಿಂದಿಯಿಂದ ಕನ್ನಡಕ್ಕೆ : ಜಿ. ಭಾಸ್ಕರ ಮಯ್ಯ

## ಕಮಲ ಹೆಮ್ಮಿಗೆ

# ಒಂದಿಷ್ಟು ಹನಿಗವನಗಳು

ಅಪರೂಪಕ್ಕೆ ಕಣ್ಣಿಂದ ಎರಡೇ ಹನಿಗಳು ಉದುರಲು
ಇವು ಮುತ್ತುಗಳೇ ಎಂದವನು ಕೇಳಿದಾಗ ನಗುಬಂತು.
ಕ್ಲೀಷೆ ಎನಿಸಿ ಅಲ್ಲಪ್ಪ ನನ್ನ ಕಣ್ಣುಗಳೇ ಎಂದೆ.

*

ಆಕಾಶ ಭೂಮಿಯನ್ನು ಭೋಗಿಸುತ್ತೇನೆಂಬುದು ಎಂಥ ಸುಳ್ಳು!
ಆದರೆ ಈ ಎರಡರ ಮಧ್ಯೆ ಎಷ್ಟೆಲ್ಲಾ ಕನಸುಗಳು...

*

ಪಾರ್ಟಿಯಲ್ಲಿ ಥರಾವರಿ ಚಹರೆ ಬಣ್ಣ, ಸೂಟು, ಧೋತ್ರ,
ಚುಡೀದಾರ್, ಪಾಟ್ರ್ಸ್, ಇಂಪೋರ್ಟೆಡ್ ಪರ್ಫ್ಯೂಮು
ತಣ್ಣಗಿನ ಬೆಚ್ಚಗಿನ ಕೈ ಕುಲುಕು. ಮನಸ್ಸುಗಳು ವಿಚಿತ್ರ
ಭೂಮ್ಯಾಕಾಶಗಳಷ್ಟೆ ಹತ್ತಿರ!

*

ಒಂದು ಸಂಜೆ ಮನಸ್ಸಿನ ತುಂಬಾ ಮೋಡಗಳು
ಬೆನ್ನಹಿಂದಿನ ಕಿಟಕಿಗೆ ಅಡ್ಡಲಾಗಿ ನನ್ನ ಗೋಮೇಧಿಕದ
ಚೌಕನೆಯ ಉಂಗುರ, ತೇಲುವ ಮೋಡ ತೋರಿಸಿ
ವಿಸ್ಮಯಗೊಳಿಸಿತು.

*

ನಿಮ್ಮೆದೆಗೆ ತಲೆಯೊತ್ತಿ ಬಿಕ್ಕುತ್ತೇನೆ
ನನ್ನ ನೋವಿನ ಗಂಧ ತಿಕ್ಕುತ್ತೇನೆ
ಇದಕ್ಕಾವ ಅಳುಕೂ ಇಲ್ಲ
ಏಕೆಂದರೆ ನೀವು ಮುಂದೆ ಹಾಯದ
ಹಿಂದೆ ಒದೆಯದ ಮನುಷ್ಯರಲ್ಲ...ಗೋಡೆಗಳು !

*

ಒಂದು ಸುತ್ತು ಮುಗಿದು ಖಾಲಿಯಾದ ಮದ್ಯದ
ಗ್ಲಾಸನ್ನು ಹೇಗೆ ಕನಿಷ್ಠವೆನ್ನಲಿ? ಅರೆರೇ...
ಇದೇಕೆ ಹೀಗೆ ಯಾರಿಗೋ, ಯಾವುದಕ್ಕೋ ಕಾದ
ಹೆಣ್ಣಿನ ರೂಪಕವಾಗಿದೆ !

ಹಿ. ಮ. ಗುರುಬಸವರಾಜ

# ನೂರರ ಹರೆಯದ ಹುಡುಗ ಶಾಸ್ತ್ರಿ *

ಈ ಹಳ್ಳಿ ಹೈದನಿಗೀಗ ಬರೀ ನೂರು ವರ್ಷ
ಮರಾಠಿ, ತೆಲುಗು, ತಮಿಳರೊಡನೆ
ಕುಸ್ತಿಯಾಡಿದರೆಂಬುದೇ ಹರ್ಷ.

ಎದುರಾಳಿ ಏರಿ ಬರುತಿರೆ ಕೆಳಕ್ಕೆ ಒಗೆಯಬೇಕೆನ್ನುವ
ಈ ಹಳ್ಳಿಯ ಹುಡುಗ
ಪಡೆದದ್ದು ಬರೀ ಬೆಳ್ಳಿಯ ಕಡಗ

ಜರೀ ಪೇಟ ಹೊನ್ನಿನ ತಟ್ಟೆ ಚಿನ್ನದ ಪದಕ ಪಡೆವ ದಾರಿಗೆ
ದಾರ ಅದಕ್ಕಿರುವ ಭಾರ
ಅಡ್ಡ ಬಂದಿತೆನ್ನುವ ಮಾತೇ ನೇರ.

ದಾರಕ್ಕೆ ಭಾರವಿಲ್ಲದಿರೆ
ಹಗುರಾಗಿ ಹಾರಬಹುದಿತ್ತೇನೋ
ಉನ್ನತ ಪೀಠದತ್ತ ಈ ಕನ್ನಡದ ಕುವರ.

ಮಾಧ್ಯಮಗಳ ಮುಖ ಪುಟಕ್ಕೆ ಏಕೋ
ಹೊಂದಿಕೆಯಾಗದು ನಮ್ಮೀ ಹುಡುಗನ ಫೋಜು.
ಹೆಚ್ಚೆಂದರೆ ಉದಯೋನ್ಮುಖರಿಗೆ
ಒಳಪುಟದ ಒಂದೆರಡು ಪೇಜು.

ತಂತಿಯ ನಾದ, ಅಜ್ಜಿಯ ಕನಸು ರಾಜನ ಕತೆ ಎಂದಿಗೂ ಅಮರ.
ಇಂದಿಗೂ ಈ ಜಂಗಮನ ಜೋಳಿಗೆಯಲ್ಲೇ
ಬಸವ ತತ್ವ ರತ್ನಾಕರ.

ಶತಕ ಬಾರಿಸಿದ ಹುಡುಗನತ್ತ ಈಗೀಗ ಊರವರ ಕಣ್ಣು.
ಅವರಿವರು ಮೆದ್ದು 'ರುಚಿಯಾಗಿದೆ'
ಎಂದು ಬಾಯಿ ಚಪ್ಪರಿಸಿದಾಗ, ಮೂಸಿ ನೋಡಿ
ಮೆಲ್ಲಗೆ ಉಸುರುತಿದ್ದೇವೆ: 'ಇದು ನಮ್ಮದೇ ತೋಟದ ಹಣ್ಣು' ●

* ಶತಾಯುಷಿ ವ್ಯಾಕರಣತೀರ್ಥ ಚಂದ್ರಶೇಖರ ಶಾಸ್ತ್ರಿಗಳನ್ನು ದಿನಾಂಕ ೧೧-೧೦-೯೩ ರಂದು ಹಡಗಲಿಯಲ್ಲಿ ಸನ್ಮಾನಿಸಿದಾಗ ಬರೆದ ಕವನ

ಶಿವರಾಮಯ್ಯ

# ಮೈಕ್ ಟೈಸನ್

೧

ಏರಿಳಿತಗಳ ಘಟ್ಟ ಮಲೆಬೆಟ್ಟಗಳ ಸೋಪಾನ
ನಿತ್ಯಹರಿದ್ವರ್ಣ ದಟ್ಟಾರಣ್ಯದ ಕಗ್ಗತ್ತಲ ಖಂಡ
ಕರಿ ಮೈ ಕೊಬ್ಬಿನ ತೋಳು ತೊಡೆ ಸಂಧಿ
ಹೊಕ್ಕುಳ ಗುಣಿ ಎಡೆ ಬಿರಿವ ಕೆಳಗಡೆಯಿಂದ

ಬೆವರ ನೀಲಿಯ ನೈಲು ಮೈಲುಂ ಮೈಲುಂ
ಮಮ್ಮಿಗಳ ಗರ್ಭವನು ಕೊರೆವ ನೀಳಂ

ಮೇಲೆ ಸುಡು ಮರಳ ಕಿಡಿ ಹುಡಿಯ ಸಹರಾ
ಕೆಳಗೆ ಉರಿಯ ಕಿರು ನಾಲಿಗೆಯ ಕಲಹರೀ
ಎದೆಯೊಳಗೆ ಕುದಿವೆಣ್ಣೆ ಬಾವಿಗಳು
ಸಸ್ಯ ರಾಜಿಯ ಕಲ್ಲಿದ್ದಲ ಕೆಂಡದುಂಡೆಗಳುಂ

೨

ಅತ್ತ ಅಮೇರಿಕಾದ ಸುವಿಶಾಲ ಹಸಿರ ಮೈದಾನ ಅಖಾಡ
ಬೂದು ಬಣ್ಣದ ಕೆಂಗಣ್ಣು ತೋಳಗಳ ಚಹರೆ ಪಹರೆ
ಭುಜ ತಟ್ಟಿ ತೊಡೆ ಕಟ್ಟಿ ಅಟ್ಟಹಾಸದಿ ಕೆನೆವ
ಜಗಜಟ್ಟಿ ಪಟ್ಟದಲ್ಲಿ ಬೊಬ್ಬಿರಿದು ಮಲೆವ
ಹಣಾಹಣಿ ಘಟ್ಟಿಸುವ ಮೈಜುಂದಟ್ಟಿಸುವ
ಬಾಕ್ಸಿಂಗ್ ಜಗಲಿಯಲಿ ಜಗವನಾಳುವ ವಠಾಟ
ಅಪ್ಪಟ ಕಪ್ಪು ತುಪ್ಪಟದಿಂದ ತೊಟ್ಟಿಡುವ ಬೆವರ
ಸೊಗಡಿಗೆ ಹಾರೈಸಿ ಬಿಟ್ಟ ಕಂಗಳ ಟಿ. ವಿ. ಲೋಕ.

೩

ಕಣ್ಣಂಚಿನ ಕೊಂಕಿನಲಿ ಹೆಣ್ಣು ಕುಣಿಸುವ ಬೇಟಕಾರ
ಬೇಕಾದರೆ ಕ್ಯೂ ಮಲಗಿಸುವ ಮುದ್ದು ಮೋಡಿಕಾರ
ಈ ಕರಿಯನ ಕಂಬಳಿ ಹೊದ್ದು ಮಲಗಿದರೆ ಸಾಕು
ಗರ್ಭಕಟ್ಟುವುವಂತೆ ಆ ಬಿಳಿಯ ಮಂದೆ ಮಣಕಗಳು

ಗಂಜಳ ಮೂಸಿ 'ಟ್ರಿಬ್ಯಾ'ಯೆಂದು ಕತ್ತು
ಮೆಟಕರಿಸಿ ಹಿಂದೆ ಸುತ್ತಿದರೆ ಅಷ್ಟೆ
ಕತ್ತರಿಸಿ ತಲೆ ಸುತ್ತಿ ಬಾಲವ ಎತ್ತಿ
ಗಪ್ಪಂತ ನಿಲ್ಲುವುವು ಸುಖದ ಮತ್ತಿಗೆ ಸಿಕ್ಕಿ
ಸಹಜ ಸುಮ್ಮಾನಕೆ ಮೈಮರೆತ ಟಗರು ಸೊಕ್ಕಿ ಹೋಗಿತ್ತು.

೪

ಇಂಥ ಬೀಜದ ತಳಿಯು ನಮಗೆ ತಮಗೆಂದು ಕಾದಾಡುವರು
ಲೋಕಾಂತರದ ನಮ್ಮ ಯೇಸುವಿನ ಖಾಸಾ ವಂಶಜರು
ಈ ಅಖಾಡದ ಕಲಿಯಿಂದ ಸ್ಪರ್ಧಾಳಿಸಿದ ತಳಿಯಿಳಿಸಿ
ಕೃತಕ ಗರ್ಭ ಕೇಂದ್ರಗಳಿಗೆ ವೀರ್ಯ ರವಾನಿಸಿ

ಡಾಲರಿನ ಬೆಲೆ ಏರಿಸಿ, ವಿದೇಶಿ ವಿನಿಮಯ ಗಳಿಸಿ
ಶ್ವೇತ ಭವನದ ಮೇಲೆ ಇನ್ನೂ ಚಿನ್ನದ ಗರಿ ನಿಲ್ಲಿಸಿ
ಜಗದ ಕಣ್ಣ ಕೀಲಿಸುವ ಶ್ವೇತಕೃಷ್ಣ ಕಾರಕರ
ಹುನ್ನಾರದ ಹೂಟ ಮರಿಯು ಬೆನ್ನಿಗೆ ಕರುಬಿನ ಗೂಟ.

೫

ಇದ್ದಕ್ಕಿದ್ದಂತೆ ಹಿಮಗಾಳಿ ತೀಡಿ ಬಂತು
ಆಲಿಕಲ್ಲುಗಳು ಬಿಳಿ ಹಲ್ಲುಗಳು ಕೆನ್ನಾಲಿಗೆಯು
ಸುರಿವ ಜೊಲ್ಲು ಹಿಮಗಿರಿಯ ಕಂದರದ
ತೋಳ ದುರುಗುಟ್ಟಿ ಗುರುಗುಟ್ಟಿ ಕಳ್ಳ
ಹೆಜ್ಜೆಯನಿಟ್ಟು ಸಂಜೆ ಬಟ್ಟೆಯಲಿ
ಬಂದು ಕೇಳಿತಿಂತು :

"ಏನೆಲವೊ ಕುರಿಮರಿ ಸರಿ ಸಮವೆ ನೀನೆಮಗೆ
ನೀರನೆಂಜಲ ಮಾಡಿ ಬಂದಿರುವೆಯಲ್ಲ ಮೇಲೆ
ಇಷ್ಟು ಭಯ ಬೇಡವೇ ನಿನಗೆ ?"

ಗೊಂದಲಿಸಿತು ಟಗರುಮರಿ ಜೀವ ನಾಲಗೆಗೆ ಬಂತು
"ಕ್ಷಮಿಸಿ ಮಹಾಸ್ವಾಮಿ ಇದೋ ನಾ ಕುಡಿದುದ್ದು
ಈ ಕೆಳಗಿನದು ತಾವು ಮೇಲಣತ್ತಲಿಂದಲೇ
ಬಂದಿರಲ್ಲ ಎಂಜಲೆಂತಾಯಿತಲ್ಲಿ ಹೇಳಿ ತಂದೆ ?"

ಕೋಪ ನೆತ್ತಿಗೆ ಏರಿ ರಕ್ತದ ರೇಚಿ ಹಲ್ಲುಮಸೆದು
ತೋಳ ನಕ್ಕಿತು ಬೆಳ್ಳಗೆ :
"ಹಾಪೌದು, ನೀನೊ ನಿನ್ನಪ್ಪನೊ ನಿನ್ನಜ್ಜನೊ ಯಾರೊ
ಎಂದೊ ಎಂಜಲು ಮಾಡಲಿಲ್ಲವೆ ಹೇಳೊ ಮೂಳ !"

೬

ನ್ಯಾಯ ದೇವತೆಗೆ ತುಲಾಭಾರ
ಶ್ವೇತ ಸುಂದರಿಯರ ಸಂತಾಪವತ್ತ
ಕೃಷ್ಣ ಸುಂದರಿಯರ ಹಿಡಿಶಾಪವಿತ್ತ
ಈ ಮಧ್ಯೆ ಕಾರಾಗೃಹವಾಸಿ ಕೃಷ್ಣ ನಿರ್ಲಿಪ್ತ

'ಕರಿಮೈ ತಣ್ಣಗೆ ಮನದಲಿ ಬಿಸಿಹಗೆ
ಇದ್ದರು ಸುಮ್ಮಗೆ ಬಾಬಾ ಹೊರಗೆ'

(೧೨-೨-೯೨ರಂದು ವಿಶ್ವ ಬಾಕ್ಸಿಂಗ್ ಚಾಂಪಿಯನ್ ಮೈಕ್ ಟೈಸನ್ನನಿಗೆ ಅಮೆರಿಕದ ಕೋರ್ಟು ಅತ್ಯಾಚಾರದ ಆಪಾದನೆ ಹೊರಿಸಿ ಕಾರಾಗೃಹಕ್ಕೆ ತಳ್ಳಿತು)

ಹನುಮಂತ ಪಾಟೀಲ

## ಜನ್ಮ ಭೂಮಿ

ಅಂದು ಅಯೋಧ್ಯೆಯಲ್ಲಿ ಪಂಚೆ ಹಾರಿಸಿ
ಕ್ಯಾಕಿ ಹೊಡೆದ ಪೇಜಾವರರ ಕನಸಿನಲ್ಲಿ
ಮೊನ್ನೆ ರಾಮ ಬಂದಿದ್ದನಂತೆ.

"ದಯವಿಟ್ಟು ನೀವಿರುವಾಗಲೇ
ನಿಮ್ಮ ಜನ್ಮಭೂಮಿಯನ್ನು ನಿರ್ಧರಿಸಿ
ಬಂದು ಬಿಡಿ"-ಎಂದು ಅಂಗಲಾಚಿದನಂತೆ.

ಲೀಲಾ ಕಲಕೋಟಿ

# ಜಗದ ಸುರುಳಿ

ಜಗದ ಸುಳಿ
ಸುರುಳಿ ಬಿಚ್ಚಿ
ಧರ್ಮದ ಬೇರುಬಿಟ್ಟು
ಜಾತಿ ಎಲೆ ಚಿಗುರಿ
ರಾಜಕೀಯ ಗಾಳಿ ಹರಡಿದಾಗೆಲ್ಲ
ಅಲ್ಲಲ್ಲಿ ಎಲೆ ಎಲೆಗಳೊ
ಳಗೆ ಸಂಘರ್ಷ......

ಕಾವೇರಿ ಕದಡಿದ್ದಾಗೆಲ್ಲ
ಅರಳಿ, ಹೂ ಅರಳುತಿರುವ
ಮೊಗ್ಗು, ಹೂಗಳೆಲ್ಲ
ಉದುರಿ, ಕಮರಿ ನೆಲಕೊರಗಿ, ನರಳಿ
ಕೆರಳಿ ಕೆಂಡಕಾರಿ
ಭಸ್ಮಾಂಭುದಿಗೆ
ಬಾಯ್ತೆರೆದು
ಕಡಿವಾಣವಿಲ್ಲದ
ಕೊಡ್ಲಿಯು ಕೈಗೆತ್ತಿದಾಗ

ಕೊನರು ಚಿಗುರುವದೇ ?
ಕಟುಕನೇ ? ಎನ್ನುವ
ಕುಹಕ ನಗೆ ಚೆಲ್ಲಿ
ಸುರುಳಿ ಮತ್ತೆ ಸುತ್ತಿ
ಸುಳಿಯೊಡೆದು ಹೆಡೆ
ಯೆತ್ತಿ ನಿಲ್ಲುವದು.

# ಜೆ. ಪಿ. ಶೌತನ್‌ರವರ 'ಅನುಭಾವಿಗಳ ಕ್ರಾಂತಿ'

ಟಿ. ಆರ್. ಚಂದ್ರಶೇಖರ

ಜೊಹಾನ್ ಪೀಟರ್ ಶೌತನ್‌ರವರ ಗ್ರಂಥ 'ಅನುಭಾವಿಗಳ ಕ್ರಾಂತಿ'ಯನ್ನು ಪರಿಚಯಿಸಲು ಇಲ್ಲಿ ಪ್ರಯತ್ನಿಸಲಾಗಿದೆ.* ನಮ್ಮ ಧಾರ್ಮಿಕ ವ್ಯವಸ್ಥೆ ಬಗ್ಗೆ, ನಮ್ಮ ಸಂಸ್ಕೃತಿಯ ಸ್ವರೂಪದ ಬಗ್ಗೆ ಲಾಗಾಯ್ತಿನಿಂದ ಪಾಶ್ಚಿಮಾತ್ಯ ವಿದ್ವಾಂಸರು ಆಸಕ್ತಿ ತೋರುತ್ತಿರುವುದು ಎಲ್ಲರಿಗೂ ತಿಳಿದಿರುವ ವಿಷಯ. ಪಾಶ್ಚಿಮಾತ್ಯ ಮಾನವಶಾಸ್ತ್ರಜ್ಞರು ಹಾಗೂ ಸಮಾಜ ಶಾಸ್ತ್ರಜ್ಞರು ಕಳೆದ ಶತಮಾನದ ಆದಿಭಾಗದಿಂದಲೂ ಈ ಬಗ್ಗೆ ಅಧ್ಯಯನ-ಸಂಶೋಧನೆ ನಡೆಸುತ್ತಾ ಬಂದಿದ್ದಾರೆ. ಅವರು ಅಂದು ನಡೆಸಿದ ಸಂಶೋಧನೆ ಕ್ಷೇತ್ರಕಾರ್ಯ, ಗ್ರಾಮ ಅಧ್ಯಯನ–ಸರ್ವೇಕ್ಷಣೆಗಳು ಇಂದಿಗೂ ನಮಗೆ ಆಕರಗಳಾಗಿ ಉಳಿದಿವೆ. ಮ್ಯಾಕ್ಸ್‌ವೆಬರ್, ಲೂಯಿಸ್ ಡುಮಾಂಟ್, ಈಥೋವನ್, ಎಡ್ಗರ್ ಥರ್‌ಸ್ಟನ್, ಫ್ರಾನ್ಸಿಸ್ ಬುಚನನ್ ಮುಂತಾದವರು ಭಾರತೀಯ ಸಮಾಜ–ಸಂಸ್ಕೃತಿ_ಧಾರ್ಮಿಕ ಸ್ವರೂಪದ ಬಗ್ಗೆ ಪ್ರಕಟಿಸಿರುವ ಗ್ರಂಥಗಳು ಅಮೂಲ್ಯವಾದ ವಿಚಾರಗಳನ್ನು ಒಳಗೊಂಡಿದ್ದಾವೆ. ಈ ಅಧ್ಯಯನಗಳ ಪ್ರಾದೇಶಿಕ ವೈವಿಧ್ಯತೆಗಳು ಅಚ್ಚರಿ ಉಂಟು ಮಾಡುವಂತಿವೆ.

ನಮ್ಮ ಸಮಾಜ-ಧರ್ಮ–ಸಂಸ್ಕೃತಿ ಕುರಿತ ಪ್ರಾರಂಭದ ಎಲ್ಲಾ ಪಾಶ್ಚಿಮಾತ್ಯ ಅಧ್ಯಯನಗಳು ಸಾಮಾನ್ಯವಾಗಿ ಅದೊಂದು 'ಜಡವಾದಿ' 'ಯಥಾಸ್ಥಿತಿವಾದಿ' ಸಮಾಜ-ಧರ್ಮ ಎಂಬ ಚಿತ್ರಣಗಳನ್ನೇ ನೀಡಿದವು. ಇಂತಹ ತೀರ್ಮಾನಗಳ

---

* J. P. Shouthen. "Revolution of Mystics–
on Social Aspects of Virasaivism"
Kak Pharos publishing house.
Kampen. The Netherlands 1991

ಪರಿಣಾಮವು ಮುಂದೆ ಜ್ಞಾನದ ಅನ್ಯಶಾಖೆಗಳಿಗೂ ಹರಿದಿರುವುದನ್ನು ನಾವು ಗಮನಿಸಬಹುದಾಗಿದೆ. ಶತ-ಶತಮಾನಗಳ ಕಾಲ ನಮ್ಮ ಸಮಾಜವು ಜಡತ್ವದಿಂದ ನಿಸ್ತೇಜವಾಗಿತ್ತು ಎಂಬಂತಹ ದುಡುಕಿನ ತೀರ್ಮಾನಗಳು ಇಂದಿನ ನಮ್ಮ ಕೆಲವು ಸಮಾಜಶಾಸ್ತ್ರೀಯ-ಮಾನವ ಶಾಸ್ತ್ರೀಯ ಅಧ್ಯಯನಗಳ ಮೂಲ ಹೇತುವಾಗಿರುವ ದುರಂತ ನಮ್ಮ ಮುಂದಿದೆ.

ಇಂತಹ ದೃಷ್ಟಿಕೋನಕ್ಕೆ ಅಪವಾದವೆಂಬಂತೆ ಜೆ. ಪಿ. ಶೌತನ್‌ರವರ' ಅನುಭಾವಿಗಳ ಕ್ರಾಂತಿ' ಗ್ರಂಥವು ೧೨ ನೇ ಶತಮಾನದ ಕರ್ನಾಟಕದಲ್ಲಿನ ವಚನ ಸಂಸ್ಕೃತಿಯ ಗತಿಶೀಲ ಸ್ವರೂಪದ ಮೇಲೆ ಬೆಳಕು ಚೆಲ್ಲುವಂತಿದೆ. ಲೇಖಕರು ಈ ಅಧ್ಯಯನದಲ್ಲಿ ಸಮಾಜಶಾಸ್ತ್ರ ಮಾನವಶಾಸ್ತ್ರಗಳ ಹಿನ್ನೆಲೆಯಲ್ಲಿ ವಚನ ಸಂಸ್ಕೃತಿಯನ್ನು ಪೃಥಕ್ಕರಿಸಲು ಪ್ರಯತ್ನಿಸಿದ್ದಾರೆ. ವಚನ ಸಂಸ್ಕೃತಿಯು ೧೨ನೇ ಶತಮಾನದ ಕರ್ನಾಟಕದ ಸಂದರ್ಭದಲ್ಲಿ 'ಜಾತಿ ವ್ಯವಸ್ಥೆ'ಯಲ್ಲಿ ಹೇಗೆ ಪರಿವರ್ತನೆಯನ್ನು ಸೃಷ್ಟಿಸಿತು ಎಂಬುದನ್ನು ಲೇಖಕರು ಗುರುತಿಸಿದ್ದಾರೆ. ಇದರ ಬಗ್ಗೆ ಅವರು ಹೀಗೆ ಬರೆಯುತ್ತಾರೆ:

The caste system is usually depicted as a very static structure which completely excludes social mobility. There are indeed not many possibilities for the individual to rise on the status ladder, but there is frequently a change in the hierarchial position of castes or section of castes."

ಮುಂದುವರಿದು ಹೇಳುತ್ತಾರೆ:

Apparently hierarchy also has a dynamic aspect that must not be ingored. (ಪು ೨೧-೨೨)

ಇಂತಹ ಒಳ್ಳೆ ನೋಟಗಳಿಂದಾಗಿ ಈ ಗ್ರಂಥ ನಮ್ಮನ್ನು ಆಕರ್ಷಿಸಿಬಿಡುತ್ತದೆ. ವೈದಿಕ ಧರ್ಮವನ್ನೇ ಈ ದೇಶದ ಪ್ರಾತಿನಿಧಿಕ ಧರ್ಮವೆಂದು ನಂಬಿ ಹೊರಟ ಪ್ರಾರಂಭದ ಪಾಶ್ಚಿಮಾತ್ಯ ಅಧ್ಯಯನಗಳೆಲ್ಲಾ ನಮ್ಮ ಸಮಾಜವನ್ನು 'ಏಕಶಿಲಾ ರಚನೆ' ಯಾಗಿ ಪರಿಗಣಿಸಿ 'ಜಡವಾದಿ' ಎಂದು ತೀರ್ಮಾನಿಸಿದ ಕ್ರಮವನ್ನು ಶೌತನ್‌ರವರ ಅಧ್ಯಯನವು ತಳ್ಳಿ ಹಾಕುತ್ತದೆ.

ವಚನ ಸಂಸ್ಕೃತಿಯನ್ನು ಶೌತನ್‌ರವರು ಕೇವಲ ಒಂದು ಭಕ್ತಿಪಂಥವಾಗಿ ಅಥವಾ ಸಾಹಿತ್ಯ ಪರಂಪರೆಯಾಗಿ ಅಥವಾ ಒಂದು ಚಳುವಳಿಯಾಗಿ ಮಾತ್ರ ಸೀಮಿತಗೊಳಿಸು

ವುದಿಲ್ಲ. ಅದರ ಸಾಮಾಜಿಕ ನೆಲೆಯನ್ನು ಅವರು ಮುಖ್ಯವಾಗಿ ಚರ್ಚೆಗೆತ್ತಿಕೊಳ್ಳುತ್ತಾರೆ. ನಾವು ಇಂದು ವಚನ ಸಂಸ್ಕೃತಿಯ ಅಧ್ಯಯನಕ್ಕೆ ಬಳಸುತ್ತಿರುವ ಸಂಶೋಧನಾ ವಿಧಾನದ ಮಿತಿಗಳನ್ನು ಈ ಗ್ರಂಥವು ಎತ್ತಿ ತೋರಿಸುತ್ತದೆ. ವಚನ ಸಂಸ್ಕೃತಿಯ ಅಧ್ಯಯನಕ್ಕೆ ಶೌತನ್‌ರವರು ಅಳವಡಿಸಿಕೊಂಡಿರುವ ಸಂಶೋಧನಾ ವಿಧಾನ (Research Methodology) ಬಹು ಶಾಸ್ತ್ರೀಯವೂ–ವಿಶಾಲ ನೆಲೆಯುಳ್ಳದ್ದೂ ಆಗಿದೆ. ಕನ್ನಡದ ಸಂದರ್ಭದಲ್ಲಿ ಈ ಬಗೆಯ ಅಧ್ಯಯನ–ಸಂಶೋಧನಾ ವಿಧಾನಗಳ ಬಳಕೆ ಅಪರೂಪವೆಂದೇ ಹೇಳಬೇಕು.

ವಚನ ಸಂಸ್ಕೃತಿಯ ಸಾಮಾಜಿಕ ಸ್ವರೂಪವು ಶೌತನ್‌ರವರನ್ನು ತುಂಬಾ ಆಕರ್ಷಿಸಿದಂತೆ ಕಾಣುತ್ತದೆ. ಅವರ ಗ್ರಂಥದ ಉಪಶೀರ್ಷಿಕೆ 'On Social Aspects of Virasaivism' ನಿಂದ ಇದು ಸ್ಪಷ್ಟವಾಗುತ್ತದೆ. ತಮ್ಮ ೩೪೦ ಪುಟಗಳ ಈ ಗ್ರಂಥದಲ್ಲಿ ಬಳಸಿರುವ ಸುಮಾರು ೧೩೭ ವಚನಗಳೂ ಸಾಮಾಜಿಕ ವಚನಗಳಾಗಿವೆ. ಅವುಗಳ ಸಾಹಿತ್ಯಿಕ ಸ್ವರೂಪಕ್ಕಿಂತ ಸಾಮಾಜಿಕ ಸ್ವರೂಪವು ಲೇಖಕರಿಗೆ ಮುಖ್ಯವಾಗಿದೆ. ವಚನ ಸಂಸ್ಕೃತಿ ಬಗ್ಗೆ ಆಸಕ್ತಿ ಇರುವವರೆಲ್ಲರೂ ಕಡ್ಡಾಯವಾಗಿ ಅಭ್ಯಾಸ ಮಾಡಬೇಕಾದ ಗ್ರಂಥ ಇದಾಗಿದೆ. ಇಂಗ್ಲೀಷ ಲಿಪಿ ಬಳಸಿ ವಚನಗಳನ್ನು ಕನ್ನಡ ಭಾಷೆಯಲ್ಲಿ ಮುದ್ರಿಸಿ ನಂತರ ಇಂಗ್ಲೀಷ್ ಅವತರಣಿಗೆ ನೀಡಿದ್ದಾರೆ. ಈ ಗ್ರಂಥವನ್ನು ಓದುವಾಗ ಕನ್ನಡದ ಗ್ರಂಥವೊಂದನ್ನು ಓದಿದ ಅನುಭವವಾಗುತ್ತದೆ.

*

ಶೌತನ್‌ರವರು ವಚನ ಸಂಸ್ಕೃತಿಯ ಸಾಮಾಜಿಕ ನೆಲೆಯನ್ನು ಅಧ್ಯಯನದ ದೃಷ್ಟಿಯಿಂದ ನಾಲ್ಕು ಭಾಗಗಳಾಗಿ ವಿಂಗಡಿಸಿಕೊಂಡಿದ್ದಾರೆ.

೧. ಜಾತಿ ವ್ಯವಸ್ಥೆ. (೭೬ ಪುಟಗಳು)
೨. ಕಾಯಕ ಮತ್ತು ಸಂಪತ್ತು. (೪೨ ಪುಟಗಳು)
೩. ಮಹಿಳೆಯ ಸ್ಥಾನಮಾನ. (೯೬ ಪುಟಗಳು)
೪. ಶಿಕ್ಷಣ (೩೫ ಪುಟಗಳು)

ತಮ್ಮ ಗ್ರಂಥದ ಒಟ್ಟು ೩೪೦ ಪುಟಗಳಲ್ಲಿ ಶೇ ೨೮.೨೪ ರಷ್ಟು ಪುಟಗಳನ್ನು ವಚನ ಸಂಸ್ಕೃತಿಯು ಮಹಿಳೆಗೆ ನೀಡಿದ್ದ ಸ್ಥಾನ ಮಾನದ ಚರ್ಚೆಗೆ ಮೀಸಲಿಟ್ಟಿದ್ದಾರೆ. (ಲೇಖಕರು ಸಾಮಾಜಿಕ ನೆಲೆಯ ನಾಲ್ಕು ಭಾಗಗಳಿಗೆ ಬಳಸಿರುವ ೨೪೯ ಪುಟಗಳಲ್ಲಿ ಶೇ ೩೮.೫೫ ಪುಟಗಳನ್ನು ಮಹಿಳೆಯ ಸ್ಥಾನ ಮಾನದ ಬಗ್ಗೆ ಮುಡುಪಿಟ್ಟಿದ್ದಾರೆ ) ವಚನ ಸಂಸ್ಕೃತಿಯಲ್ಲಿ ಮಹಿಳೆ ಗಳಿಸಿದ್ದ ಉನ್ನತ ಸ್ಥಾನ ಹಾಗೂ ವಚನ ಸಂಸ್ಕೃತಿಯು ಮಹಿಳೆಯ ಬಗ್ಗೆ ತಳೆದಿದ್ದ ನಿಲುವು ಶೌತನ್‌ರವರನ್ನು ತುಂಬಾ ಕಾಡಿದಂತೆ ಕಾಣುತ್ತದೆ, ಅಕ್ಕಮಹಾದೇವಿ, ಮುಕ್ತಾಯಕ್ಕ, ರೆಮ್ಮವ್ವೆ, ಮಹಾದೇವಮ್ಮ, ಲಕ್ಕಮ್ಮ ಮುಂತಾದವರ ಸಿದ್ಧಿ–ಸಾಧನೆಗಳನ್ನು ಅವರು ಸುದೀರ್ಘವಾಗಿ ಚರ್ಚಿಸಿದ್ದಾರೆ.

ವಚನ ಸಂಸ್ಕೃತಿಯಲ್ಲಿ ಮಹಿಳೆ ಪಡೆದಿದ್ದ ಧಾರ್ಮಿಕ ಸ್ವಾತಂತ್ರ್ಯ, ಲೈಂಗಿಕ ಸಮಾನತೆಗಳನ್ನು ವಿವರವಾಗಿ ಪರಿಶೀಲಿಸಿದ್ದಾರೆ. ಮಹಿಳೆ ಹಾಗೂ ಸೂತಕ-ಅಶುದ್ಧತೆಗಳ ಸಂಬಂಧವನ್ನು ವೈದಿಕ ಧರ್ಮ ಹಾಗೂ ವಚನ ಸಂಸ್ಕೃತಿಗಳ ಹಿನ್ನೆಲೆಯಲ್ಲಿ ಚರ್ಚಿಸಿದ್ದಾರೆ. ಒಂದು ರೀತಿಯ ತುಲನಾತ್ಮಕ ಅಧ್ಯಯನವನ್ನು ನಾವು ಇಲ್ಲಿ ನೋಡಬಹುದಾಗಿದೆ.

ಇದರ ಜೊತೆಗೆ ೧೨ನೇ ಶತಮಾನದ ವಚನ ಸಂಸ್ಕೃತಿಯಲ್ಲಿ ಮಹಿಳೆ ಪಡೆದಿದ್ದ ಸ್ಥಾನ-ಮಾನ ಕಾಲಾನಂತರ ಹೇಗೆ ಪಲ್ಲಟಗೊಂಡಿತು, ವಿಕೃತಿಗೊಂಡಿತು ಎಂಬುದನ್ನೂ ಸಹ ಶೌತನ್ ಇಲ್ಲಿ ಚರ್ಚಿಸಿದ್ದಾರೆ. ಈ ಬಗ್ಗೆ ಅವರು ಪರಿಶೀಲಿಸಿರುವ ಎರಡು ವಚನಗಳನ್ನು ನಾವು ಗಮನಿಸಬಹುದು.

ಕದಿರ ರೆಮ್ಮವ್ವೆಯ ವಚನ.

> "ಎಲ್ಲರ ಹೆಂಡಿರು ತೊಳಸಿಕ್ಕುವರು.
> ಎನ್ನ ಗಂಡಂಗೆ ತೊಳಸುವುದಿಲ್ಲ.
> ಎಲ್ಲರ ಗಂಡಂದಿರಿಗೆ ಬಸಿವರು
> ಎನ್ನ ಗಂಡಂಗೆ ಬಸಿವುದಿಲ್ಲ
> ಎಲ್ಲರ ಗಂಡಂದಿರಿಗೆ ಬೀಜವುಂಟು
> ಎನ್ನ ಗಂಡಂಗೆ ಅಂಡದ ಬೀಜವಿಲ್ಲ
> ಎಲ್ಲರ ಗಂಡಂದಿರು ಮೇಲೆ
> ಎನ್ನ ಗಂಡ ಕೆಳಗೆ, ನಾ ಮೇಲೆ
> ಕದಿರ ರೆಮ್ಮಿಯೊಡೆಯ ಗುಮ್ಮೇಶ್ವರ" (ಪು ೧೮೧)

೧೨ನೇ ಶತಮಾನದ ಕರ್ನಾಟಕದಲ್ಲಿ ಸೃಷ್ಟಿಗೊಂಡ ವಚನ ಸಂಸ್ಕೃತಿಯಲ್ಲಿ ಹೆಣ್ಣು ತನ್ನ ಸ್ಥಾನದ ಬಗ್ಗೆ ತುಂಬಾ ಎಚ್ಚರವುಳ್ಳವಳಾಗಿದ್ದಳು ಎಂಬುದು ಮೇಲಿನ ವಚನದಿಂದ ಸ್ಪಷ್ಟವಾಗುತ್ತದೆ. ಸಾಂಪ್ರದಾಯಿಕವಾಗಿ ವೈದಿಕ ಧರ್ಮದ ಹಿನ್ನೆಲೆಯಲ್ಲಿ ನಂಬಿಕೊಂಡು ಬಂದಿದ್ದ ಪುರುಷ ಪ್ರಧಾನ ಮೌಲ್ಯವನ್ನು (ಎಲ್ಲರ ಗಂಡಂದಿರು ಮೇಲೆ) ರೆಮ್ಮವ್ವೆ ವಚನ ಸಂಸ್ಕೃತಿಯು ಹುಟ್ಟುಹಾಕಿದ್ದ ಲಿಂಗ ಸಮಾನತೆ ಮೌಲ್ಯದ ಹಿನ್ನೆಲೆಯಲ್ಲಿ 'ಎನ್ನ ಗಂಡ ಕೆಳಗೆ, ನಾ ಮೇಲೆ' ಎನ್ನುವ ಲೈಂಗಿಕ ಕ್ರಿಯೆಯ ಸಂಕೇತದ ಮೂಲಕ ತಿರಸ್ಕರಿಸುತ್ತಿದ್ದಾಳೆ. ಆದರೆ ಕಾಲಾನಂತರ ವಚನ ಸಂಸ್ಕೃತಿಯ ಲಿಂಗ ಸಮಾನತೆ ಮೌಲ್ಯವು ಹೇಗೆ ಪಲ್ಲಟಗೊಂಡಿತು ಎಂಬುದನ್ನು ಶೌತನ್‌ರವರು ೧೫ನೇ ಶತಮಾನದ ತೋಂಟದ ಸಿದ್ಧಲಿಂಗೇಶ್ವರರ ಈ ಕೆಳಗಿನ ವಚನವನ್ನು ಉಲ್ಲೇಖಿಸಿ ದಿಙ್ಮಾತ್ರವನ್ನಾಗಿಸುತ್ತಾರೆ.

# ಮುನಿ ರೂಪಚಂದ ಅವರ ಮುಕ್ತಕಗಳು

ಪಂಚಾಕ್ಷರಿ ಹಿರೇಮಠ

ಇಲ್ಲಿಯ ಮುಕ್ತಕಗಳ ಮೂಲ ಹಿಂದೀ ಕವಿ ಮುನಿ ಶ್ರೀ ರೂಪಚಂದ ಅವರು ಕವಿ, ದಾರ್ಶನಿಕ, ದ್ರಷ್ಟಾರರು. ಮುನಿ ಶ್ರೀ ರೂಪಚಂದರು ಹಲವು ಸಲ ಸಮಗ್ರ ಭಾರತ ದೇಶವನ್ನು ಪಾದಯಾತ್ರೆಯಿಂದ ಸುತ್ತಿದ್ದಾರೆ. ಪ್ರತಿಯೊಂದು ಸ್ಥಳದಲ್ಲಿ ಕೆಲಕಾಲವಿದ್ದು ಅಲ್ಲಿಯ ಭಾಷೆ, ಜನಾಂಗ, ಧರ್ಮ, ಸಂಸ್ಕೃತಿ, ಅಲ್ಲಿಯ ಜೀವನ, ಆಚಾರ-ವಿಚಾರ ಎಲ್ಲವನ್ನು ಹತ್ತಿರದಿಂದ ಅರಿತಿದ್ದಾರೆ. ಇದರಿಂದಾಗಿ ಅವರು ಸಮಗ್ರ ಭಾರತದ ಜೀವನಾಡಿಯ ಸ್ಪಂದನ ಕೇಳಿದ್ದಾರೆ, ಕೇಳಿದ ಸ್ಪಂದನಕ್ಕೆ ಅವರೂ ಸ್ಪಂದಿಸಿದ್ದಾರೆ. ಅವರ ಮುಕ್ತಕಗಳಿಗೆ ಇಂಥ ಅಪರೂಪದ ಲೋಕಾನುಭವದಿಂದ ಬಹುದೊಡ್ಡ ಶಕ್ತಿ ಬಂದಿದೆ.

ಮುನಿ ಶ್ರೀ ರೂಪಚಂದರು ಎಳೆಯ ವಯಸ್ಸಿನಲ್ಲಿಯೇ ಜೈನ ಮುನಿ ದೀಕ್ಷೆಯನ್ನು ತೇರಾ ಪಂಥದ ಆಚಾರ್ಯ ಶ್ರೀ ತುಳಸಿ ಅವರಿಂದ ಪಡೆದರು. ಈಗ ಕೆಲ ವರ್ಷಗಳ ಹಿಂದೆ ಆ ಪಂಥದ ಅತೀ ಸಂಪ್ರದಾಯವಾದ ಹಿಡಿಸದೇ ಮುನಿ ಶ್ರೀ ರೂಪಚಂದರು ಹೊರಗೆ ಬಂದು ದಿಲ್ಲಿಯಲ್ಲಿ 'ಮಾನವ ಮಂದಿರ ಮಿಶನ್' ಸಂಸ್ಥೆಯನ್ನು ಸ್ಥಾಪಿಸಿ ಅದರ ಮುಖಾಂತರ ಎಲ್ಲ ಧರ್ಮೀಯರನ್ನು ಒಂದೆಡೆ ಸೇರುವಂತೆ ಮಾಡಿದ್ದಾರೆ.

ರಾಜಸ್ಥಾನದ ಸರದಾರ ಶಹರದಲ್ಲಿ ೧೯೩೮ರ ಸಪ್ಟಂಬರ ೨೨ ರಂದು ಈ ಕವಿ ಹುಟ್ಟಿದರು. ಅವರು ತಮ್ಮ ೧೫ನೇ ವರ್ಷದಲ್ಲಿಯೇ ಕವಿತೆಗಳನ್ನು ಪ್ರಕಟಿಸತೊಡಗಿದರು, ಈ ವರೆಗೂ ೨೫ ಪುಸ್ತಕಗಳು ಬಂದಿವೆ ಅವುಗಳಲ್ಲಿ ಆರು ಕವಿತೆ ಹಾಗೂ ಮುಕ್ತಕಗಳ ಸಂಗ್ರಹಗಳು. ಒಂದೊಂದು ಸಂಗ್ರಹಗಳೂ ಹತ್ತಾರು ಸಲ ಮರು ಮುದ್ರಣ ಕಂಡಿವೆ. 'ಖಾಲಿ ಆಕಾಶವು'* ಎನ್ನುವ ಮುಕ್ತಕಗಳ ಸಂಗ್ರಹ ಜಗತ್ತಿನ

* ೧, 'ಬಯಲ ಬಾನಿನಲ್ಲಿ', ಕನ್ನಡರೂಪ, ಡಾ. ಪಂಚಾಕ್ಷರಿ ಹಿರೇಮಠ

ಹಲವಾರು ಭಾಷೆಗೆ ಅನುವಾದಗೊಂಡು ಪ್ರಕಟವಾಗಿದೆ. ಕನ್ನಡದಲ್ಲಿಯೋ ಅದು ಎರಡನೆಯ ಮುದ್ರಣ ಕಂಡಿದೆ.
ಹಿಂದೀ, ಸಂಸ್ಕೃತ, ಪ್ರಾಕೃತ, ಪಾಲಿ, ಇಂಗ್ಲಿಷ ಭಾಷೆಗಳ ಮೇಲೆ ಈ ಕವಿಗೆ ಪ್ರಭುತ್ವ ಇದೆ. ಇಂದಿನ ಹಿಂದೀ ಕಾವ್ಯ ಕ್ಷೇತ್ರದಲ್ಲಿ ಅವರು ಕ್ರಾಂತಿಕಾರಿ ಹಾಗೂ ದಾರ್ಶನಿಕ ಕವಿಯೆಂದೇ ಪ್ರಸಿದ್ಧರಾಗಿದ್ದಾರೆ.

ಈ ಜೈನ ಮುನಿಗಳು ಅವರ ಸಂಪ್ರದಾಯ, ಪರಂಪರೆಯ ಪ್ರಕಾರ ಯಾವುದೇ ವಾಹನಗಳಲ್ಲಿ ಪ್ರವಾಸ ಮಾಡುವ ಹಾಗಿಲ್ಲ. ಆದರೆ ಮುನಿ ಶ್ರೀ ರೂಪಚಂದರು ಆಯೆಲ್ಲ ಸಂಪ್ರದಾಯ ಮೀರಿ ಇತ್ತೀಚಿನ ವರ್ಷಗಳಲ್ಲಿ ಕಾರು, ರೈಲು, ವಿಮಾನಗಳ ಮೂಲಕ ಸಂಚರಿಸಿ ಭಗವಾನ್ ಮಹಾವೀರರ ದಿವ್ಯ ಸಂದೇಶ ಜಗತ್ತಿನ ಮೂಲೆ ಮೂಲೆಗೂ ತಲುಪಿಸುವ ಹುಣಿಹ ಹೊತ್ತಿದ್ದಾರೆ, ಮೂರು ವರ್ಷಗಳಿಂದಲೂ ಅವರು ಯುರೋಪ, ಅಮೇರಿಕಾ, ಕೆನಡಾ ದೇಶಗಳಲ್ಲಿ ಸಂಚರಿಸುತ್ತಿದ್ದಾರೆ. ಇದು ಅವರು ಮನುಷ್ಯರ ಕಲ್ಯಾಣದಲ್ಲಿಟ್ಟುಕೊಂಡಿರುವ ಆಸಕ್ತಿಯನ್ನು ತೋರಿಸುತ್ತದೆ. ಅವರು ತಮ್ಮ ಸಮಸ್ತ ತಪಸ್ಸು, ಜ್ಞಾನ, ದರ್ಶನ ತಮ್ಮದೆನ್ನುವುದೆಲ್ಲವನ್ನೂ ಮಾನವ ಜನಾಂಗದ ಕಲ್ಯಾಣಕ್ಕಾಗಿ ಧಾರೆಯೆರೆಯುವ ಸಂಕಲ್ಪ ಹೊಂದಿದ್ದಾರೆ. ಮುನಿ ಶ್ರೀ ರೂಪಚಂದ ಈಗ ಟೆಕ್ಸಾಸದಲ್ಲಿದ್ದಾರೆ,

ಇಲ್ಲಿಯ ಮುಕ್ತಕಗಳನ್ನು ಕುರಿತು ನಾನು ಏನೂ ಹೇಳ ಬಯಸುವುದಿಲ್ಲ. ಏಕೆಂದರೆ ಹೇಳಬೇಕಾದುದನ್ನೆಲ್ಲ ಮುಕ್ತಕಗಳೇ ಹೇಳಲು ಸಮರ್ಥವಾಗಿರುವಾಗ ಅವುಗಳಿಗೆ ಇನ್ನೊಬ್ಬರ ವ್ಯಾಖ್ಯೆಯ ಹಂಗು ಬೇಕಾಗಿಲ್ಲವೆಂದೇ ನನ್ನ ಭಾವನೆ.

## ಮುಕ್ತಕಗಳು

೧

ನಿನ್ನೆ ವಸಂತಗಳಿಗೆ ರಾತ್ರಿಯೆಲ್ಲ ನಿದ್ರೆ ಬರಲಿಲ್ಲ
ನಿನ್ನೆ ಚುಕ್ಕಿಗಳಿಗೆ ರಾತ್ರಿಯೆಲ್ಲ ನಿದ್ರೆ ಬರಲಿಲ್ಲ!
ಯಾವುದೋ ನಿರಾಶ್ರಿತನಿಂದ ವಿದ್ರೋಹದ ಮಾತು ಕೇಳಿ
ನಿನ್ನೆ ಆಶ್ರಯಕ್ಕೆ ರಾತ್ರಿಯೆಲ್ಲ ನಿದ್ರೆ ಬರಲಿಲ್ಲ!

೨

ತೆರೆಗಳು ನಾವನ್ನು ಮುಳುಗಿಸುವುದಿಲ್ಲ ದಡ ಸೇರಿಸುತ್ತವೆ
ತೊಂದರೆಗಳೇ ಜೀವನವನ್ನು ಥಳಥಳಿಸುವಂತೆ ಮಾಡುತ್ತವೆ;
ಜೀವನದೆದುರಿಗಿರುವ ಸಾವನ್ನು ಕಂಡು ನಾವು ಹೆದರುತ್ತೇವೆ.
ಆದರೆ ಸಾವಲ್ಲ, ಹೆಚ್ಚಾಗಿ ಜೀವನವೇ ನಮ್ಮನ್ನು ಕೊಲ್ಲುತ್ತದೆ!

೩

ದೀಪಾವಳಿ ಅಲ್ಲ, ನಾವು ಹೋಳಿ ಆಡುವುದನ್ನು ಕಲಿತಿದ್ದೇವೆ
ಪರಿಶ್ರಮವಲ್ಲ, ನಾವು ಇಂದಿನವರೆಗೂ ಜೋಳಿಗೆ ತೆರೆವುದನ್ನೇ ಕಲಿತಿದ್ದೇವೆ;
ಯಾವಾಗಲೂ, ನಾವು ವೈರಿಯೊಂದಿಗೆ ಅಹಿಂಸೆಯಿಂದ ನಡೆದುಕೊಂಡಿದ್ದೇವೆ
ಕೇವಲ ದೇಶವಾಸಿಗಳ ಮೇಲೆ ನಾವು ಗುಂಡು ಹಾರಿಸುವುದನ್ನು ಕಲಿತಿದ್ದೇವೆ;

೪

ಬೇಡುವುದಲ್ಲ, ನಾವಂತೂ ದಾನದ ಭಾಷೆ ಅರಿತಿದ್ದೇವೆ
ಅಮೃತದ್ದಲ್ಲ, ಕೇವಲ ವಿಷ ಕುಡಿವ ಭಾಷೆ ತಿಳಿದಿದ್ದೇವೆ!
ವಿಲಾಸ-ವಿಶ್ರಾಂತಿಯ ಭಾಷೆ ಬಗ್ಗೆ ಇನ್ನಾರಿಗಾದರೂ ಕೇಳಿ
ಓ! ಮಿತ್ರರೇ! ನಾವಂತೂ ಕೇವಲ ಬಲಿದಾನದ ಭಾಷೆ ಅರಿತಿದ್ದೇವೆ!

೫

ಪರಂಪರೆಯನ್ನು ನುಚ್ಚು ನೂರು ಮಾಡಿಯೆಂದು ನಾನು ಹೇಳುವುದಿಲ್ಲ
ನಿಮ್ಮ ಸಂಬಂಧವನ್ನು ಅನ್ಯ ಸಂಪ್ರದಾಯದೊಂದಿಗೆ ಬೆಳೆಸಿಯೆಂದು ಕೇಳುವುದಿಲ್ಲ
ಐಕ್ಯದ ಮಾತು ನಿಮಗೆ ಸರಿಯೆನಿಸದಿದ್ದಲ್ಲಿ, ಓ ಧರ್ಮದ ಆಚಾರ್ಯರೇ
ಧರ್ಮದಲ್ಲಿ ಒಡಕು ಹುಟ್ಟಿಸುವ ಪಾಪವನ್ನಾದರೂ ಮಾಡದಿರಿ!

೬

ಚಿಂದಿಯಾಗಿರುವ ನಮ್ಮ ಹೃದಯವನ್ನು ಹೊಲಿವವರು ಬೇಕಾಗಿದ್ದಾರೆ
ಬೆಂಕಿ ಹಚ್ಚುವವರಲ್ಲ, ಬೆಂಕಿ ಕುಡಿವವರು ಬೇಕಾಗಿದ್ದಾರೆ!
ಅಹಿಂಸೆಯ ಉಪದೇಶ ಕೇಳಿ ಕೇಳಿ ರೋಸಿ ಹೋಗಿದ್ದೇವೆ ನಾವು
ಉಪದೇಶ ನೀಡುವವರಲ್ಲ; ಅದನ್ನು ಬದುಕುವವರು ಬೇಕಾಗಿದ್ದಾರೆ!

೭

ಮರಳು ಭೂಮಿಯಲ್ಲಿ ಯಾವ ಹೂವೂ ಅರಳಲಾರದು
ರಕ್ತರಂಜಿತ ಬಟ್ಟೆ ರಕ್ತದಿಂದಲೇ ಸ್ವಚ್ಛವಾಗಲಾರದು!
ಎದೆಯಲ್ಲಿಯೇ ಪ್ರೇಮ ಸ್ರೋತವಿಲ್ಲದಿರುವಾಗ

ಓ! ಧರ್ಮದ ಗುತ್ತಿಗೆದಾರರೇ……
ಕಲಹದ ಕೆಸರಿನಲ್ಲಿ ಧರ್ಮದ ವೃಕ್ಷ ಬೆಳೆಯಲಾರದು!

೮

ಈಗ ಧರ್ಮ ಒಂದು ತೊಂದರೆ, ಅಪಾಯ, ಪೀಡೆ
ಎಂದು ಭಾಸವಾಗತೊಡಗಿದೆ ಜನರಿಗೆ;
ಮುಗ್ಧರನ್ನು ವಂಚಿಸಲು ಸರಳ, ಸುಲಭವಾದ
ಒಂದು ಕಲೆ ಎಂದು ಭಾವಿಸಲಾಗುತ್ತಿದೆ!
ಈ ಜ್ಯೋತಿರ್ಮಯ ದೀಪಶಿಖೆಯಿಂದ
ಪ್ರೇಮದ ಪ್ರಕಾಶ ಪ್ರಕಟವಾಗಗೊಡಿ!
ಓ! ನನ್ನ ಧರ್ಮದ ಆಚಾರ್ಯರೇ,
ಇದರಲ್ಲಿ ನಿಮ್ಮ ಕಲ್ಯಾಣವೂ ಇದೆ. ನಮ್ಮ ಕಲ್ಯಾಣವೂ ಇದೆ!

೯

ಎಲ್ಲರಿಗೂ ತಮ್ಮ ಅಹಂ ಹೆಚ್ಚು
ಅನ್ಯರಾಗಿ ಪ್ರೀತಿ ಎಲ್ಲಿ ?
ಯಾರೂ ತಮ್ಮ ಉಪದೇಶ
ಆಚರಣೆಯಲ್ಲಿ ತರಲು ಸಿದ್ಧರಿಲ್ಲ!
ತಮ್ಮ ಸಂಪ್ರದಾಯಕ್ಕಾಗಿ
ಸಾಯಲೂ ಸಿದ್ಧರಿದ್ದಾರೆ.
ಆದರೆ ಧರ್ಮಕ್ಕಾಗಿ ಸಾಯಲು
ಯಾರೂ ಸಿದ್ಧರಿಲ್ಲ!

೧೦

ಸಮೂಹಕ್ಕೆ ಯಾವ ರೂಪವೂ ಇರುವುದಿಲ್ಲ
ಸಮೂಹಕ್ಕೆ ಯಾವ ಬುದ್ಧಿಯೂ ಇರುವುದಿಲ್ಲ!
ಅದು ಯಾವಾಗಲೂ ಕುರಿಯ ಹಾಗೆ ಚಲಿಸುತ್ತದೆ
ಅಲ್ಲಿ ಕಣ್ಣಿನ ಅವಶ್ಯಕತೆಯೇ ಇರುವುದಿಲ್ಲ!

೧೧

ಸಮೂಹ ಯಾವಾಗಲೂ ಕುರುಡಾಗಿರುತ್ತದೆ
ತಿಳಿಯದಲೇ ಬಂಧನದಲ್ಲಿ ಸಿಲುಕುತ್ತದೆ!
ನಿರ್ಜನ ಪ್ರದೇಶ ಮಾತ್ರ ಸ್ವಚ್ಛವಾಗಿರುತ್ತದೆ
ಕೇವಲ ಜನನಿಬಿಡ ಓಣಿಗಳು ಹೊಲಸಾಗಿರುತ್ತವೆ!

೧೨

ತೀರ ಹತ್ತಿರವಾದುದೇ ತೀರ ದೂರವಾಗಿರುತ್ತದೆ
ಸನ್ಯಾಸವಿದ್ದಲ್ಲಿಯೇ ಹೆಚ್ಚು ಸಂಸಾರ ಭಾರವಿರುತ್ತದೆ !
ವೈರಿಗಳ ಮಧ್ಯೆ ನಮಗಷ್ಟು ಮೋಸವಾಗುವುದಿಲ್ಲ
ವಿಶ್ವಾಸವಿದ್ದಲ್ಲಿಯೇ ನಾವು ಹೆಚ್ಚು ವಂಚನೆಗೀಡಾಗುತ್ತೇವೆ !

೧೩

ನಮ್ಮ ಮುಗುಳ್ನಗೆಯ ಹಿಂದೆಯೂ ಒಂದು ಉದ್ದೇಶವಿರುತ್ತದೆ
ನಮ್ಮ ಪರಿಚಯದ ಹಿಂದೆಯೂ ಒಂದು ಉದ್ದೇಶವಿರುತ್ತದೆ !
ಉದ್ದೇಶವಿಲ್ಲದಲೇ ನಮ್ಮ ತಲೆ ಎಲ್ಲಿಯೂ ಬಾಗುವುದಿಲ್ಲ
ನಮ್ಮ ದೇವರ ಕಲ್ಪನೆಯ ಹಿಂದೆಯೂ ಒಂದು ಉದ್ದೇಶವಿರುತ್ತದೆ !

೧೪

ಕತ್ತೆ ಬಟ್ಟೆಗಂಟಿನ ಭಾರ ಹೊರುತ್ತದೆ
ಮನುಷ್ಯ ಅಹಂಕಾರದ ಭಾರ ಹೊರುತ್ತಾನೆ !
ಕತ್ತೆಯ ಹಾಗೆ ಮನುಷ್ಯ ಕೂಡ
ಕೃತ್ರಿಮ ಕಣ್ಣೀರು ಹಾಕಿ ಅಳುತ್ತಾನೆ !
ಇಬ್ಬರಲ್ಲೂ ಸಾಕಷ್ಟು ಸಾಮ್ಯ ಕಂಡು
ಕತ್ತೆ ಮನುಷ್ಯನಾಗುತ್ತದೆಯೋ
ಅಥವಾ ಮನುಷ್ಯ ಕತ್ತೆಯಾಗುತ್ತಿದ್ದಾನೋ
ಎಂಬುದು, ನನಗೆ ತಿಳಿಯದಂತಾಗಿದೆ !

೧೫

ಬಡವರ ಗೋಳು ಕೇಳುವವರು ಯಾರೂ ಇಲ್ಲ
ತನ್ನ ಆದರ್ಶಕ್ಕಾಗಿ ಸಾವನಪ್ಪುವವರು ಯಾರೂ ಇಲ್ಲ !
ಪಾಪ, ಗಾಂಧೀ ತಾತ ಉರಿವ ಬಿಸಿಲಲ್ಲಿ ನಿಂತಿಹ
ಚೌಕದಲ್ಲಿ
ಆತನ ತೆರೆದ ತಲೆಗೆ ನೆರಳು ಮಾಡುವವರು ಯಾರೂ
ಇಲ್ಲ !

೧೬

ಮೋಸ ಮಾಡಿ ನೀನೆಷ್ಟು ಒಳಿತು ಮಾಡಿದೆ ಗೆಳೆಯ
ಅನ್ಯರ ಒಳ ಹೊಕ್ಕು ನೋಡಲು ನೀನೊಂದು ಕಿಟಕಿ ನೀಡಿದೆ !
ನೇಹದ ಪರಿಚಯ ನೀಡುವ ಅವಕಾಶವಿದಾಗಿತ್ತು
ಹೋಗಲಿ, ಜಾಗರೂಕನಾಗಲು ಮತ್ತೊಂದು ಅವಕಾಶ ನೀಡಿದೆ !

೧೭

ಈ ಮಹಾನ್ ಭಾರತ ಏನೆಂಥ ಪಾಪ ಮಾಡಿದೆಯೋ ನಾನರಿಯೆ
ಒಮ್ಮೆ ರಶಿಯಾ. ಒಮ್ಮೆ ಅಮೇರಿಕಾ ಇದಕ್ಕೆ ಆಶ್ರಯ ನೀಡಿವೆ !
ಪರಿಶ್ರಮವಿಲ್ಲದೆಯೇ ನಮ್ಮ ಹೊಟ್ಟೆ ತುಂಬಲಿ ಎಂಬ ಉದ್ದೇಶವಿರಬಹುದು
ಆದರೆ ಸತ್ಯವೇನಂದರೆ ಭಿಕ್ಷೆ ರೊಟ್ಟಿ ತಿನ್ನುವ ಹವ್ಯಾಸವೇ
ಮುಂದೆ ಈ ದೇಶವನ್ನು ಹಾಳು ಮಾಡುತ್ತದೆ !

೧೮

ಈ ನಾಯಕರು ಎಣ್ಣೆಯಿಲ್ಲದೆ ದೀಪ ಅದೆಷ್ಟು ಕಾಲ ಉರಿಸಬಲ್ಲರು ?
ಕಾಗದದ ಹೂಗಳಿಂದ ಈ ತೋಟ ಎಲ್ಲಿಯವರೆಗೆ ಅರಳಿಸಬಲ್ಲರು ?
ಸ್ವತಃ ಕಾನೂನಿನ ಕತ್ತು ಹಿಚುಕಿ ಸಂಸತ್ತಿಗೆ ಹೋಗುವವರು
ಕಾನೂನಿನ ದಾರಿಯಲ್ಲಿ ಪ್ರಜೆಗಳ ಹೇಗೆ ನಡೆಸಬಲ್ಲರು ?

೧೯

ವಿಲಾಸ ಪೂರ್ಣ ಪಂಚತಾರಾಗಳಲ್ಲಿ
ವಿಶ್ರಾಂತಿ ಪಡೆಯುತ್ತಿರುವ ಓ! ನೇತಾಗಳೇ,
ಕೊಂಚ ಬಡವರ ಗುಡಿಸಲುಗಳನೂ ಕೇಳಿ
ಅವುಗಳ ಮೇಲೆ ಏನು ನಡೆದಿದೆ ಎಂಬುದನು !

೨೦

ಯಾರು ಅಧಿಕಾರಕ್ಕಾಗಿ
ಈ ದೇಶ ಹಾಳು ಮಾಡಿದ್ದಾರೋ
ಅಂಥವರು ಎಂದೂ ತ್ಯಾಗಿಗಳನು,
ಬಲಿದಾನಿಗಳನು ನಿರ್ಮಿಸಲಾರರು !

೨೧

ಬರುವ ಕಾಲ ಏನೆಂಥ ಕರಾಳವಾಗಿದೆಯೋ,
ಪೂಜೆಯ ತಟ್ಟೆ ರುಂಡಗಳಿಂದ ಸಿಂಗರಿಸಿರಬಹುದು !
ನಮ್ಮ ಬಲಿದಾನ ಎಂದೂ ನಿಷ್ಫಲವಾಗಿ ಹೋಗಲಾರದು,
ನೋಡಬೇಕು, ಹುಟ್ಟಲಿರುವ ಸೂರ್ಯ ಹೆಚ್ಚು
ಕೆಂಪಾಗಿರುವ ಸಾಧ್ಯತೆ ಇದೆಯೇನೋ !

೨೨

ಮಾನವತೆಯ ಹೂದೋಟದಲಿ
ಯಾರೋ ವಿಷ ಪುಷ್ಪ ಅರಳಿಸಿದ್ದಾರೆ !
ಈ ಅಮೃತದ ಬದುಕಿನಲಿ
ಯಾರೋ ವಿಷ ಕೂಡಿಸಿದ್ದಾರೆ !

ಹಾಗಿದ್ದರೂ ಹಾಯಾಗಿ ಇದನು
ಮಾಣಿಸುತ್ತ ಕುಳಿತಿರುವ
ಯುವಕರ ಕಂಡು ಯೋಚಿಸುತ್ತೇನೆ-
ಇವರ ಕುದಿವ ರಕ್ತ-ಎಲ್ಲಿ ಎಂದು !

೨೩

ಎಲ್ಲಿ ಶಾಂತಿಯಾ ಪುಟಗಳ ಮೇಲೆ
ದಿನವೂ ರಕ್ತರಂಜಿತ ಬೆರಳುಗಳು ಹರಡುತ್ತಲಿವೆಯೋ
ಎಲ್ಲಿ ನ್ಯಾಯದ ಪಾರಿವಾಳ ವಿಷಪೂರಿತ
ಬಾಣ ಸಹಿಸುತ್ತಲಿದೆಯೋ
ಎಲ್ಲಿ ಬೆಳಕು ಪಡೆಯಲು ಮಾನವ
ಮದ್ದಿನೊಂದಿಗೆ ಆಡುತ್ತಿರುವನೋ
ಅಂಥಲ್ಲಿ ಯಾವ ಮಸಿಯಿಂದ
ಬರೆಯಬೇಕು ಶಾಂತಿಯ ಸಂದೇಶ ?

೨೪

ಪ್ರತಿಯೊಂದು ತೋಟ
ಹೂವಿನ ಲಾಭ ಪಡೆಯಲು ಯತ್ನಿಸಿದೆ !
ಪ್ರತಿಯೊಂದು ಪ್ರವಾಹ
ತೀರದ ಲಾಭ ಪಡೆಯಲು ಯತ್ನಿಸಿದೆ !
ತನ್ನ ಪರಂಪರೆಯು ಸ್ಥಿರವಾಗಿಡಲು
ಸಮಾಜ ಪ್ರತಿಯೊಬ್ಬನ
ಅಜ್ಞಾನದ ಲಾಭ ಪಡೆಯಲು ಯತ್ನಿಸಿದೆ !

೨೫

ಹೊಸ ಹಾಡಿಗೆ ತನ್ಮಯತೆ, ವಿಶ್ವಾಸ ನೀಡು,
ಹೊಸ ರೆಕ್ಕೆಗೆ ಹಾರಲು ಆಕಾಶ ನೀಡು !
ಹೊಸ ಜನಾಂಗದ ಮುಗುಳ್ನಗೆಯ ಕಸಿಯದಿರು,
ಹೊಸ ಬೆಳೆಗೆ ನಗಲು ಅವಕಾಶ ನೀಡು !

ಪಿ. ಮಂಜುನಾಥ

# ನಗರದ ರಾತ್ರಿ

ಆ ನಡು ರಾತ್ರಿಯಲ್ಲಿ
ನಗರ ಬೆಡ್ ಶೀಟ್ ಹೊದ್ದು ಮಲಗಿತ್ತು;
ಹಗಲಿದ್ದ
ವ್ಯವಹಾರವೆಲ್ಲ ಹೂತು ಹೋಗಿತ್ತು.

ರಸ್ತೆಯೆಂಬ ಸೀಳುದಾರಿಯ ಮಗ್ಗುಲಲ್ಲಿ
ಕಾಂಪೌಂಡಿನ ಮನೆಗಳು, ಕಿಟಕಿಗಳು
ಮೌನದಲ್ಲಿ ಹರಟುತ್ತಿದ್ದವು;
ನನ್ನ ಕಂಡು ನಾಯಿ ಬೊಗಳುತ್ತಿದ್ದವು
ಕಚ್ಚಿರಲಿಲ್ಲ!
ಆದರೂ
ನಾಲ್ಕು ಜನರ ರಾತ್ರಿ ವ್ಯಾಪಾರಿ ಗುಂಪು
ನನ್ನ ಮುತ್ತಿತ್ತು.
ನಾಲ್ಕು ಮೆತ್ತಿತ್ತು!

ನೋವಿಗೆ ಕಿರಿಚಿದ್ದೆ
ಗೋಡೆಗಳ, ಕಿಟಕಿಗಳ
ಮೌನದ ಮಾತಿಗೆ ಪೆಟ್ಟಾಗಿ
ಮಾತು ನಿಂತವು.

ಅರೆ ಪ್ರಜ್ಞೆ ಇರುವಾಗಲೆ
ಕಿಟಕಿಗಳಲ್ಲಿ ಮಿಣುಕಿ-ಮಿಂಚಿ ಬೆಳಕು ಹತ್ತಿತು;
ಅಸ್ಪಷ್ಟ ತಲೆಗಳು ಗಾಜಿನ ಹಿಂದೆ ನಿಂತವು.
ಆ ತಲೆಗಳು ಬಾಗಿಲು ತೆರೆಯುವು-
ದಿಲ್ಲವೆಂದು ಗೊತ್ತಿತ್ತು.

ಕಿಟಕಿ ತೆರೆದು ನೋಡುವ ನಂಬಿಕೆ ಇತ್ತು;
ಹಾಗಾಗಲಿಲ್ಲ
ಗಾಜು ಪಾರದರ್ಶಕವಲ್ಲವೆ!
ಕಾಣುತ್ತಿದ್ದೆವು:
ಬಿದ್ದಿದ್ದ ನಾನು; ಹೋಗುತ್ತಿದ್ದ ಅವರು.

# ಮುನಿ ರೂಪಚಂದ ಅವರ ಮುಕ್ತಕಗಳು

ಪಂಚಾಕ್ಷರಿ ಹಿರೇಮಠ

ಇಲ್ಲಿಯ ಮುಕ್ತಕಗಳ ಮೂಲ ಹಿಂದೀ ಕವಿ ಮುನಿ ಶ್ರೀ ರೂಪಚಂದ ಅವರು ಕವಿ, ದಾರ್ಶನಿಕ, ದ್ರಷ್ಟಾರರು. ಮುನಿ ಶ್ರೀ ರೂಪಚಂದರು ಹಲವು ಸಲ ಸಮಗ್ರ ಭಾರತ ದೇಶವನ್ನು ಪಾದಯಾತ್ರೆಯಿಂದ ಸುತ್ತಿದ್ದಾರೆ. ಪ್ರತಿಯೊಂದು ಸ್ಥಳದಲ್ಲಿ ಕೆಲಕಾಲವಿದ್ದು ಅಲ್ಲಿಯ ಭಾಷೆ, ಜನಾಂಗ, ಧರ್ಮ, ಸಂಸ್ಕೃತಿ, ಅಲ್ಲಿಯ ಜೀವನ, ಆಚಾರ-ವಿಚಾರ ಎಲ್ಲವನ್ನು ಹತ್ತಿರದಿಂದ ಅರಿತಿದ್ದಾರೆ. ಇದರಿಂದಾಗಿ ಅವರು ಸಮಗ್ರ ಭಾರತದ ಜೀವನಾಡಿಯ ಸ್ಪಂದನ ಕೇಳಿದ್ದಾರೆ, ಕೇಳಿದ ಸ್ಪಂದನಕ್ಕೆ ಅವರೂ ಸ್ಪಂದಿಸಿದ್ದಾರೆ. ಅವರ ಮುಕ್ತಕಗಳಿಗೆ ಇಂಥ ಅಪರೂಪದ ಲೋಕಾನುಭವದಿಂದ ಬಹುದೊಡ್ಡ ಶಕ್ತಿ ಬಂದಿದೆ.

ಮುನಿ ಶ್ರೀ ರೂಪಚಂದರು ಎಳೆಯ ವಯಸ್ಸಿನಲ್ಲಿಯೇ ಜೈನ ಮುನಿ ದೀಕ್ಷೆಯನ್ನು ತೇರಾ ಪಂಥದ ಆಚಾರ್ಯ ಶ್ರೀ ತುಳಸಿ ಅವರಿಂದ ಪಡೆದರು. ಈಗ ಕೆಲ ವರ್ಷಗಳ ಹಿಂದೆ ಆ ಪಂಥದ ಅತೀ ಸಂಪ್ರದಾಯವಾದ ಹಿಡಿಸದೇ ಮುನಿ ಶ್ರೀ ರೂಪಚಂದರು ಹೊರಗೆ ಬಂದು ದಿಲ್ಲಿಯಲ್ಲಿ 'ಮಾನವ ಮಂದಿರ ಮಿಶನ್' ಸಂಸ್ಥೆಯನ್ನು ಸ್ಥಾಪಿಸಿ ಅದರ ಮುಖಾಂತರ ಎಲ್ಲ ಧರ್ಮೀಯರನ್ನು ಒಂದೆಡೆ ಸೇರುವಂತೆ ಮಾಡಿದ್ದಾರೆ.

ರಾಜಸ್ಥಾನದ ಸರದಾರ ಶಹರದಲ್ಲಿ ೧೯೩೯ರ ಸಪ್ಟೆಂಬರ ೨೨ ರಂದು ಈ ಕವಿ ಹುಟ್ಟಿದರು. ಅವರು ತಮ್ಮ ೧೫ನೇ ವರ್ಷದಲ್ಲಿಯೇ ಕವಿತೆಗಳನ್ನು ಪ್ರಕಟಿಸತೊಡಗಿದರು, ಈ ವರೆಗೂ ೨೫ ಪುಸ್ತಕಗಳು ಬಂದಿವೆ ಅವುಗಳಲ್ಲಿ ಆರು ಕವಿತೆ ಹಾಗೂ ಮುಕ್ತಕಗಳ ಸಂಗ್ರಹಗಳು. ಒಂದೊಂದು ಸಂಗ್ರಹಗಳೂ ಹತ್ತಾರು ಸಲ ಮರು ಮುದ್ರಣ ಕಂಡಿವೆ. 'ಖಾಲಿ ಆಕಾಶವು'* ಎನ್ನುವ ಮುಕ್ತಕಗಳ ಸಂಗ್ರಹ ಜಗತ್ತಿನ

---

* ೧. 'ಬಯಲ ಬಾನಿನಲ್ಲಿ', ಕನ್ನಡರೂಪ, ಡಾ. ಪಂಚಾಕ್ಷರಿ ಹಿರೇಮಠ

ಹಲವಾರು ಭಾಷೆಗೆ ಅನುವಾದಗೊಂಡು ಪ್ರಕಟವಾಗಿದೆ. ಕನ್ನಡದಲ್ಲಿಯೇ ಅದು ಎರಡನೆಯ ಮುದ್ರಣ ಕಂಡಿದೆ.
ಹಿಂದೀ, ಸಂಸ್ಕೃತ, ಪ್ರಾಕೃತ, ಪಾಲಿ, ಇಂಗ್ಲಿಷ ಭಾಷೆಗಳ ಮೇಲೆ ಈ ಕವಿಗೆ ಪ್ರಭುತ್ವ ಇದೆ. ಇಂದಿನ ಹಿಂದೀ ಕಾವ್ಯ ಕ್ಷೇತ್ರದಲ್ಲಿ ಅವರು ಕ್ರಾಂತಿಕಾರಿ ಹಾಗೂ ದಾರ್ಶನಿಕ ಕವಿಯೆಂದೇ ಪ್ರಸಿದ್ಧರಾಗಿದ್ದಾರೆ.

ಈ ಜೈನ ಮುನಿಗಳು ಅವರ ಸಂಪ್ರದಾಯ, ಪರಂಪರೆಯ ಪ್ರಕಾರ ಯಾವುದೇ ವಾಹನಗಳಲ್ಲಿ ಪ್ರವಾಸ ಮಾಡುವ ಹಾಗಿಲ್ಲ. ಆದರೆ ಮುನಿ ಶ್ರೀ ರೂಪಚಂದರು ಆಯೆಲ್ಲ ಸಂಪ್ರದಾಯ ಮೀರಿ ಇತ್ತೀಚಿನ ವರ್ಷಗಳಲ್ಲಿ ಕಾರು, ರೈಲು, ವಿಮಾನಗಳ ಮೂಲಕ ಸಂಚರಿಸಿ ಭಗವಾನ್ ಮಹಾವೀರರ ದಿವ್ಯ ಸಂದೇಶ ಜಗತ್ತಿನ ಮೂಲೆ ಮೂಲೆಗೂ ತಲುಪಿಸುವ ಮಣಿಹ ಹೊತ್ತಿದ್ದಾರೆ, ಮೂರು ವರ್ಷಗಳಿಂದಲೂ ಅವರು ಯುರೋಪ, ಅಮೇರಿಕಾ, ಕೆನಡಾ ದೇಶಗಳಲ್ಲಿ ಸಂಚರಿಸುತ್ತಿದ್ದಾರೆ. ಇದು ಅವರು ಮನುಷ್ಯರ ಕಲ್ಯಾಣದಲ್ಲಿಟ್ಟುಕೊಂಡಿರುವ ಆಸಕ್ತಿಯನ್ನು ತೋರಿಸುತ್ತದೆ. ಅವರು ತಮ್ಮ ಸಮಸ್ತ ತಪಸ್ಸು, ಜ್ಞಾನ, ದರ್ಶನ ತಮ್ಮದೆನ್ನುವುದೆಲ್ಲವನ್ನೂ ಮಾನವ ಜನಾಂಗದ ಕಲ್ಯಾಣಕ್ಕಾಗಿ ಧಾರೆಯೆರೆಯುವ ಸಂಕಲ್ಪ ಹೊಂದಿದ್ದಾರೆ. ಮುನಿ ಶ್ರೀ ರೂಪಚಂದ ಈಗ ಟೆಕ್ಸಾಸದಲ್ಲಿದ್ದಾರೆ,

ಇಲ್ಲಿಯ ಮುಕ್ತಕಗಳನ್ನು ಕುರಿತು ನಾನು ಏನೂ ಹೇಳ ಬಯಸುವುದಿಲ್ಲ. ಏಕೆಂದರೆ ಹೇಳಬೇಕಾದುದನ್ನೆಲ್ಲ ಮುಕ್ತಕಗಳೇ ಹೇಳಲು ಸಮರ್ಥವಾಗಿರುವಾಗ ಅವುಗಳಿಗೆ ಇನ್ನೊಬ್ಬರ ವ್ಯಾಖ್ಯೆಯ ಹಂಗು ಬೇಕಾಗಿಲ್ಲವೆಂದೇ ನನ್ನ ಭಾವನೆ.

## ಮುಕ್ತಕಗಳು

೧

ನಿನ್ನೆ ವಸಂತಗಳಿಗೆ ರಾತ್ರಿಯೆಲ್ಲ ನಿದ್ರೆ ಬರಲಿಲ್ಲ
ನಿನ್ನೆ ಚುಕ್ಕಿಗಳಿಗೆ ರಾತ್ರಿಯೆಲ್ಲ ನಿದ್ರೆ ಬರಲಿಲ್ಲ!
ಯಾವುದೋ ನಿರಾಶ್ರಿತನಿಂದ ವಿದ್ರೋಹದ ಮಾತು ಕೇಳಿ
ನಿನ್ನೆ ಆಶ್ರಯಕ್ಕೆ ರಾತ್ರಿಯೆಲ್ಲ ನಿದ್ರೆ ಬರಲಿಲ್ಲ!

೨

ತೆರೆಗಳು ನಾವನ್ನು ಮುಳುಗಿಸುವುದಿಲ್ಲ ದಡ ಸೇರಿಸುತ್ತವೆ
ತೊಂದರೆಗಳೇ ಜೀವನವನ್ನು ಥಳಥಳಿಸುವಂತೆ ಮಾಡುತ್ತವೆ;
ಜೀವನದೆದುರಿಗಿರುವ ಸಾವನ್ನು ಕಂಡು ನಾವು ಹೆದರುತ್ತೇವೆ.
ಆದರೆ ಸಾವಲ್ಲ, ಹೆಚ್ಚಾಗಿ ಜೀವನವೇ ನಮ್ಮನ್ನು ಕೊಲ್ಲುತ್ತದೆ!

೩

ದೀಪಾವಳಿ ಅಲ್ಲ, ನಾವು ಹೋಳಿ ಆಡುವುದನ್ನು ಕಲಿತಿದ್ದೇವೆ
ಪರಿಶ್ರಮವಲ್ಲ, ನಾವು ಇಂದಿನವರೆಗೂ ಜೋಳಿಗೆ ತೆರೆವುದನ್ನೇ ಕಲಿತಿದ್ದೇವೆ;
ಯಾವಾಗಲೂ, ನಾವು ವೈರಿಯೊಂದಿಗೆ ಅಹಿಂಸೆಯಿಂದ ನಡೆದುಕೊಂಡಿದ್ದೇವೆ
ಕೇವಲ ದೇಶವಾಸಿಗಳ ಮೇಲೆ ನಾವು ಗುಂಡು ಹಾರಿಸುವುದನ್ನು ಕಲಿತಿದ್ದೇವೆ;

೪

ಬೇಡುವುದಲ್ಲ, ನಾವಂತೂ ದಾನದ ಭಾಷೆ ಅರಿತಿದ್ದೇವೆ
ಅಮೃತದ್ದಲ್ಲ, ಕೇವಲ ವಿಷ ಕುಡಿವ ಭಾಷೆ ತಿಳಿದಿದ್ದೇವೆ!
ವಿಲಾಸ-ವಿಶ್ರಾಂತಿಯ ಭಾಷೆ ಬಗ್ಗೆ ಇನ್ನಾರಿಗಾದರೂ ಕೇಳಿ
ಓ! ಮಿತ್ರರೇ! ನಾವಂತೂ ಕೇವಲ ಬಲಿದಾನದ ಭಾಷೆ ಅರಿತಿದ್ದೇವೆ!

೫

ಪರಂಪರೆಯನ್ನು ನುಚ್ಚು ನೂರು ಮಾಡಿಯೆಂದು ನಾನು ಹೇಳುವುದಿಲ್ಲ
ನಿಮ್ಮ ಸಂಬಂಧವನ್ನು ಅನ್ಯ ಸಂಪ್ರದಾಯದೊಂದಿಗೆ ಬೆಳೆಸಿಯೆಂದು ಕೇಳುವುದಿಲ್ಲ
ಐಕ್ಯದ ಮಾತು ನಿಮಗೆ ಸರಿಯೆನಿಸದಿದ್ದಲ್ಲಿ, ಓ ಧರ್ಮದ ಆಚಾರ್ಯರೇ
ಧರ್ಮದಲ್ಲಿ ಒಡಕು ಹುಟ್ಟಿಸುವ ಪಾಪವನ್ನಾದರೂ ಮಾಡದಿರಿ!

೬

ಚಿಂದಿಯಾಗಿರುವ ನಮ್ಮ ಹೃದಯವನ್ನು ಹೊಲಿವವರು ಬೇಕಾಗಿದ್ದಾರೆ
ಬೆಂಕಿ ಹಚ್ಚುವವರಲ್ಲ, ಬೆಂಕಿ ಕುಡಿವವರು ಬೇಕಾಗಿದ್ದಾರೆ!
ಅಹಿಂಸೆಯ ಉಪದೇಶ ಕೇಳಿ ಕೇಳಿ ರೋಸಿ ಹೋಗಿದ್ದೇವೆ ನಾವು
ಉಪದೇಶ ನೀಡುವವರಲ್ಲ; ಅದನ್ನು ಬದುಕುವವರು ಬೇಕಾಗಿದ್ದಾರೆ!

೭

ಮರಳು ಭೂಮಿಯಲ್ಲಿ ಯಾವ ಹೂವೂ ಅರಳಲಾರದು
ರಕ್ತರಂಜಿತ ಬಟ್ಟೆ ರಕ್ತದಿಂದಲೇ ಸ್ವಚ್ಛವಾಗಲಾರದು!
ಎದೆಯಲ್ಲಿಯೇ ಪ್ರೇಮ ಸ್ರೋತವಿಲ್ಲದಿರುವಾಗ

ಓ! ಧರ್ಮದ ಗುತ್ತಿಗೆದಾರರೇ......
ಕಲಹದ ಕೆಸರಿನಲ್ಲಿ ಧರ್ಮದ ವೃಕ್ಷ ಬೆಳೆಯಲಾರದು!

೮

ಈಗ ಧರ್ಮ ಒಂದು ತೊಂದರೆ, ಅಪಾಯ, ಪೀಡೆ
ಎಂದು ಭಾಸವಾಗತೊಡಗಿದೆ ಜನರಿಗೆ;
ಮುಗ್ಧರನ್ನು ವಂಚಿಸಲು ಸರಳ, ಸುಲಭವಾದ
ಒಂದು ಕಲೆ ಎಂದು ಭಾವಿಸಲಾಗುತ್ತಿದೆ!
ಈ ಜ್ಯೋತಿರ್ಮಯ ದೀಪಶಿಖೆಯಿಂದ
ಪ್ರೇಮದ ಪ್ರಕಾಶ ಪ್ರಕಟವಾಗಗೊಡಿ!
ಓ! ನನ್ನ ಧರ್ಮದ ಆಚಾರ್ಯರೇ,
ಇದರಲ್ಲಿ ನಿಮ್ಮ ಕಲ್ಯಾಣವೂ ಇದೆ. ನಮ್ಮ ಕಲ್ಯಾಣವೂ ಇದೆ!

೯

ಎಲ್ಲರಿಗೂ ತಮ್ಮ ಅಹಂ ಹೆಚ್ಚು
ಅನ್ಯರಾಗಿ ಪ್ರೀತಿ ಎಲ್ಲಿ ?
ಯಾರೂ ತಮ್ಮ ಉಪದೇಶ
ಆಚರಣೆಯಲ್ಲಿ ತರಲು ಸಿದ್ಧರಿಲ್ಲ!
ತಮ್ಮ ಸಂಪ್ರದಾಯಕ್ಕಾಗಿ
ಸಾಯಲು ಸಿದ್ಧರಿದ್ದಾರೆ.
ಆದರೆ ಧರ್ಮಕ್ಕಾಗಿ ಸಾಯಲು
ಯಾರೂ ಸಿದ್ಧರಿಲ್ಲ!

೧೦

ಸಮೂಹಕ್ಕೆ ಯಾವ ರೂಪವೂ ಇರುವುದಿಲ್ಲ
ಸಮೂಹಕ್ಕೆ ಯಾವ ಬುದ್ಧಿಯೂ ಇರುವುದಿಲ್ಲ!
ಅದು ಯಾವಾಗಲೂ ಕುರಿಯ ಹಾಗೆ ಚಲಿಸುತ್ತದೆ
ಅಲ್ಲಿ ಕಣ್ಣಿನ ಅವಶ್ಯಕತೆಯೇ ಇರುವುದಿಲ್ಲ!

೧೧

ಸಮೂಹ ಯಾವಾಗಲೂ ಕುರುಡಾಗಿರುತ್ತದೆ
ತಿಳಿಯದಲೇ ಬಂಧನದಲ್ಲಿ ಸಿಲುಕುತ್ತದೆ!
ನಿರ್ಜನ ಪ್ರದೇಶ ಮಾತ್ರ ಸ್ವಚ್ಛವಾಗಿರುತ್ತದೆ
ಕೇವಲ ಜನನಿಬಿಡ ಓಣಿಗಳು ಹೊಲಸಾಗಿರುತ್ತವೆ!

೧೨

ತೀರ ಹತ್ತಿರವಾದುದೇ ತೀರ ದೂರವಾಗಿರುತ್ತದೆ
ಸನ್ಯಾಸವಿದ್ದಲ್ಲಿಯೇ ಹೆಚ್ಚು ಸಂಸಾರ ಭಾರವಿರುತ್ತದೆ !
ವೈರಿಗಳ ಮಧ್ಯೆ ನಮಗಷ್ಟು ಮೋಸವಾಗುವುದಿಲ್ಲ
ವಿಶ್ವಾಸವಿದ್ದಲ್ಲಿಯೇ ನಾವು ಹೆಚ್ಚು ವಂಚನೆಗೀಡಾಗುತ್ತೇವೆ !

೧೩

ನಮ್ಮ ಮುಗುಳ್ನಗೆಯ ಹಿಂದೆಯೂ ಒಂದು ಉದ್ದೇಶವಿರುತ್ತದೆ
ನಮ್ಮ ಪರಿಚಯದ ಹಿಂದೆಯೂ ಒಂದು ಉದ್ದೇಶವಿರುತ್ತದೆ !
ಉದ್ದೇಶವಿಲ್ಲದಲೇ ನಮ್ಮ ತಲೆ ಎಲ್ಲಿಯೂ ಬಾಗುವುದಿಲ್ಲ
ನಮ್ಮ ದೇವರ ಕಲ್ಪನೆಯ ಹಿಂದೆಯೂ ಒಂದು ಉದ್ದೇಶವಿರುತ್ತದೆ !

೧೪

ಕತ್ತೆ ಬಟ್ಟೆಗಂಟಿನ ಭಾರ ಹೊರುತ್ತದೆ
ಮನುಷ್ಯ ಅಹಂಕಾರದ ಭಾರ ಹೊರುತ್ತಾನೆ !
ಕತ್ತೆಯ ಹಾಗೆ ಮನುಷ್ಯ ಕೂಡ
ಕೃತ್ರಿಮ ಕಣ್ಣೀರು ಹಾಕಿ ಅಳುತ್ತಾನೆ !
ಇಬ್ಬರಲ್ಲೂ ಸಾಕಷ್ಟು ಸಾಮ್ಯ ಕಂಡು
ಕತ್ತೆ ಮನುಷ್ಯನಾಗುತ್ತದೆಯೋ
ಅಥವಾ ಮನುಷ್ಯ ಕತ್ತೆಯಾಗುತ್ತಿದ್ದಾನೋ
ಎಂಬುದು, ನನಗೆ ತಿಳಿಯದಂತಾಗಿದೆ !

೧೫

ಬಡವರ ಗೋಳು ಕೇಳುವವರು ಯಾರೂ ಇಲ್ಲ
ತನ್ನ ಆದರ್ಶಕ್ಕಾಗಿ ಸಾವನಪ್ಪುವವರು ಯಾರೂ ಇಲ್ಲ !
ಪಾಪ, ಗಾಂಧೀ ತಾತ ಉರಿವ ಬಿಸಿಲಲ್ಲಿ ನಿಂತಿಹ
ಚೌಕದಲ್ಲಿ
ಆತನ ತೆರೆದ ತಲೆಗೆ ನೆರಳು ಮಾಡುವವರು ಯಾರೂ
ಇಲ್ಲ !

೧೬

ಮೋಸ ಮಾಡಿ ನೀನೆಷ್ಟು ಒಳಿತು ಮಾಡಿದೆ ಗೆಳೆಯ
ಅನ್ಯರ ಒಳ ಹೊಕ್ಕು ನೋಡಲು ನೀನೊಂದು ಕಿಟಕಿ ನೀಡಿದೆ !
ನೇಹದ ಪರಿಚಯ ನೀಡುವ ಅವಕಾಶವಿದಾಗಿತ್ತು
ಹೋಗಲಿ, ಜಾಗರೂಕನಾಗಲು ಮತ್ತೊಂದು ಅವಕಾಶ ನೀಡಿದೆ !

೧೭

ಈ ಮಹಾನ್ ಭಾರತ ಏನೆಂಥ ಪಾಪ ಮಾಡಿದೆಯೋ ನಾನರಿಯೆ
ಒಮ್ಮೆ ರಶಿಯಾ. ಒಮ್ಮೆ ಅಮೇರಿಕಾ ಇದಕ್ಕೆ ಆಶ್ರಯ ನೀಡಿವೆ !
ಪರಿಶ್ರಮವಿಲ್ಲದೆಯೇ ನಮ್ಮ ಹೊಟ್ಟೆ ತುಂಬಲಿ ಎಂಬ ಉದ್ದೇಶವಿರಬಹುದು
ಆದರೆ ಸತ್ಯವೇನಂದರೆ ಭಿಕ್ಷೆ ರೊಟ್ಟಿ ತಿನ್ನುವ ಹವ್ಯಾಸವೇ
ಮುಂದೆ ಈ ದೇಶವನ್ನು ಹಾಳು ಮಾಡುತ್ತದೆ !

೧೮

ಈ ನಾಯಕರು ಎಣ್ಣೆಯಿಲ್ಲದೆ ದೀಪ ಅದೆಷ್ಟು ಕಾಲ ಉರಿಸಬಲ್ಲರು ?
ಕಾಗದದ ಹೂಗಳಿಂದ ಈ ತೋಟ ಎಲ್ಲಿಯವರೆಗೆ ಅರಳಿಸಬಲ್ಲರು ?
ಸ್ವತಃ ಕಾನೂನಿನ ಕತ್ತು ಹಿಚುಕಿ ಸಂಸತ್ತಿಗೆ ಹೋಗುವವರು
ಕಾನೂನಿನ ದಾರಿಯಲ್ಲಿ ಪ್ರಜೆಗಳ ಹೇಗೆ ನಡೆಸಬಲ್ಲರು ?

೧೯

ವಿಲಾಸ ಪೂರ್ಣ ಪಂಚತಾರಾಗಳಲ್ಲಿ
ವಿಶ್ರಾಂತಿ ಪಡೆಯುತ್ತಿರುವ ಓ! ನೇತಾಗಳೇ,
ಕೊಂಚ ಬಡವರ ಗುಡಿಸಲುಗಳನೂ ಕೇಳಿ
ಅವುಗಳ ಮೇಲೆ ಏನು ನಡೆದಿದೆ ಎಂಬುದನು !

೨೦

ಯಾರು ಅಧಿಕಾರಕ್ಕಾಗಿ
ಈ ದೇಶ ಹಾಳು ಮಾಡಿದ್ದಾರೋ
ಅಂಥವರು ಎಂದೂ ತ್ಯಾಗಿಗಳನು,
ಬಲಿದಾನಿಗಳನು ನಿರ್ಮಿಸಲಾರರು !

೨೧

ಬರುವ ಕಾಲ ಏನೆಂಥ ಕರಾಳವಾಗಿದೆಯೋ,
ಪೂಜೆಯ ತಟ್ಟೆ ರುಂಡಗಳಿಂದ ಸಿಂಗರಿಸಿರಬಹುದು !
ನಮ್ಮ ಬಲಿದಾನ ಎಂದೂ ನಿಷ್ಫಲವಾಗಿ ಹೋಗಲಾರದು,
ನೋಡಬೇಕು, ಹುಟ್ಟಲಿರುವ ಸೂರ್ಯ ಹೆಚ್ಚು
ಕೆಂಪಾಗಿರುವ ಸಾಧ್ಯತೆ ಇದೆಯೇನೋ !

೨೨

ಮಾನವತೆಯ ಹೂದೋಟದಲಿ
ಯಾರೋ ವಿಷ ಪುಷ್ಪ ಅರಳಿಸಿದ್ದಾರೆ !
ಈ ಅಮೃತದ ಬದುಕಿನಲಿ
ಯಾರೋ ವಿಷ ಕೂಡಿಸಿದ್ದಾರೆ !

ಹಾಗಿದ್ದರೂ ಹಾಯಾಗಿ ಇದನು
ಮೂಕಸುತ್ತ ಕುಳಿತಿರುವ
ಯುವಕರ ಕಂಡು ಯೋಚಿಸುತ್ತೇನೆ-
ಇವರ ಕುದಿವ ರಕ್ತ-ಎಲ್ಲಿ ಎಂದು !

೨೩

ಎಲ್ಲಿ ಶಾಂತಿಯಾ ಪುಟಗಳ ಮೇಲೆ
ದಿನವೂ ರಕ್ತರಂಜಿತ ಬೆರಳುಗಳು ಹರಡುತ್ತಲಿವೆಯೋ
ಎಲ್ಲಿ ನ್ಯಾಯದ ಪಾರಿವಾಳ ವಿಷಪೂರಿತ
ಬಾಣ ಸಹಿಸುತ್ತಲಿದೆಯೋ
ಎಲ್ಲಿ ಬೆಳಕು ಪಡೆಯಲು ಮಾನವ
ಮದ್ದಿನೊಂದಿಗೆ ಆಡುತ್ತಿರುವನೋ
ಅಂಥಲ್ಲಿ ಯಾವ ಮಸಿಯಿಂದ
ಬರೆಯಬೇಕು ಶಾಂತಿಯ ಸಂದೇಶ ?

೨೪

ಪ್ರತಿಯೊಂದು ತೋಟ
ಹೂವಿನ ಲಾಭ ಪಡೆಯಲು ಯತ್ನಿಸಿದೆ !
ಪ್ರತಿಯೊಂದು ಪ್ರವಾಹ
ತೀರದ ಲಾಭ ಪಡೆಯಲು ಯತ್ನಿಸಿದೆ !
ತನ್ನ ಪರಂಪರೆಯು ಸ್ಥಿರವಾಗಿಡಲು
ಸಮಾಜ ಪ್ರತಿಯೊಬ್ಬನ
ಅಜ್ಞಾನದ ಲಾಭ ಪಡೆಯಲು ಯತ್ನಿಸಿದೆ !

೨೫

ಹೊಸ ಹಾಡಿಗೆ ತನ್ಮಯತೆ, ವಿಶ್ವಾಸ ನೀಡು,
ಹೊಸ ರೆಕ್ಕೆಗೆ ಹಾರಲು ಆಕಾಶ ನೀಡು !
ಹೊಸ ಜನಾಂಗದ ಮುಗುಳ್ನಗೆಯ ಕಸಿಯದಿರು,
ಹೊಸ ಬೆಳೆಗೆ ನಗಲು ಅವಕಾಶ ನೀಡು !

ಪಿ. ಮಂಜುನಾಥ

# ನಗರದ ರಾತ್ರಿ

ಆ ನಡು ರಾತ್ರಿಯಲ್ಲಿ
ನಗರ ಬೆಡ್ ಶೀಟ್ ಹೊದ್ದು ಮಲಗಿತ್ತು;
ಹಗಲಿದ್ದ
ವ್ಯವಹಾರವೆಲ್ಲ ಹೂತು ಹೋಗಿತ್ತು.

ರಸ್ತೆಯೆಂಬ ಸೀಳುದಾರಿಯ ಮಗ್ಗುಲಲ್ಲಿ
ಕಾಂಪೌಂಡಿನ ಮನೆಗಳು, ಕಿಟಕಿಗಳು
ಮೌನದಲ್ಲಿ ಹರಟುತ್ತಿದ್ದವು;
ನನ್ನ ಕಂಡು ನಾಯಿ ಬೊಗಳುತ್ತಿದ್ದವು
ಕಚ್ಚಿರಲಿಲ್ಲ!
ಆದರೂ
ನಾಲ್ಕು ಜನರ ರಾತ್ರಿ ವ್ಯಾಪಾರಿ ಗುಂಪು
ನನ್ನ ಮುತ್ತಿತ್ತು.
ನಾಲ್ಕು ಮೆತ್ತಿತ್ತು!

ನೋವಿಗೆ ಕಿರಿಚಿದ್ದೆ
ಗೋಡೆಗಳ, ಕಿಟಕಿಗಳ
ಮೌನದ ಮಾತಿಗೆ ಪೆಟ್ಟಾಗಿ
ಮಾತು ನಿಂತವು.

ಅರೆ ಪ್ರಜ್ಞೆ ಇರುವಾಗಲೆ
ಕಿಟಕಿಗಳಲ್ಲಿ ಮಿಣಕಿ–ಮಿಂಚಿ ಬೆಳಕು ಹತ್ತಿತು;
ಅಸ್ಪಷ್ಟ ತಲೆಗಳು ಗಾಜಿನ ಹಿಂದೆ ನಿಂತವು.
ಆ ತಲೆಗಳು ಬಾಗಿಲು ತೆರೆಯುವು–
ದಿಲ್ಲವೆಂದು ಗೊತ್ತಿತ್ತು.

ಕಿಟಕಿ ತೆರೆದು ನೋಡುವ ನಂಬಿಕೆ ಇತ್ತು;
ಹಾಗಾಗಲಿಲ್ಲ
ಗಾಜು ಪಾರದರ್ಶಕವಲ್ಲವೆ!
ಕಾಣುತ್ತಿದ್ದೆವು:
ಬಿದ್ದಿದ್ದ ನಾನು; ಹೋಗುತ್ತಿದ್ದ ಅವರು.

# ಕನ್ನಡ–ಮರಾಠಿ

ಪ್ರಲ್ಹಾದ ಮುದಗಲ್ಲ

ಕಳೆದ ಶತಮಾನ, ಉತ್ತರ ಕರ್ನಾಟಕದ ಕನ್ನಡ ಭಾಷೆಯು ಸ್ಥಿತಿಯು ಶೋಚನೀಯವಾಗಿತ್ತು ಎಂಬುದು ಎಲ್ಲರಿಗೂ ತಿಳಿದ ಐತಿಹಾಸಿಕ ಸಂಗತಿ. ಇಂತಹ ವಿಷಮ ಪರಿಸ್ಥಿತಿಗೆ ಎದುರಾಗಿ ದುಡಿದವರೂ ಅನೇಕರು. ಡೆಪ್ಯೂಟಿ ಚೆನ್ನಬಸಪ್ಪನವರು "ತಾಯ್ನುಡಿಯು ಬಲವೇ ನಮ್ಮ ಬಲ; ಸಮಾಜ ಸಂಘಟನೆಗೆ ಅದು ಮೂಲ ದ್ರವ್ಯವಾಗಬೇಕು" ಎಂಬ ನಿಲುವನ್ನು ತಿಳಿಸಿ ಹೇಳಿದರು; ಕನ್ನಡ-ಮರಾಠಿ ಭಾಷೆಯಲ್ಲಿ ಕೃಷಿ ಮಾಡಿದರು. ಚೆನ್ನಬಸಪ್ಪನವರು ಬರೆದ "ಸಮೀಕರಣ ಸಂಗ್ರಹ" ಎಂಬ ಗಣಿತ ಪುಸ್ತಕದ ಮುದ್ರಣ (ಮರಾಠಿ) ವಿಠ್ಠಲ ಸಖಾರಾಮ ಅಗ್ನಿಹೋತ್ರಿ ಪುಣೆ, ಇವರ ಮುದ್ರಣಾಲಯದಲ್ಲಿ ೧೮೫೭ರಲ್ಲಿ ಪ್ರಕಟಗೊಂಡಿತು. ಪ್ರಸ್ತಾವನೆಯಲ್ಲಿ "ಗಣಿತ ವಿದ್ಯೆಯ ಜ್ಞಾನ ಹಿಂದುಸ್ಥಾನದಲ್ಲಿ ಮೊದಲಿನಿಂದಲೂ ಸಾಕಷ್ಟು ಪ್ರಚಲಿತವಿದೆ. ಈ ವಿಷಯಕ್ಕೆ ಸಂಬಂಧಪಟ್ಟ ಗ್ರಂಥಗಳು ಹೆಚ್ಚಾಗಿ ಸಂಸ್ಕೃತ ಭಾಷೆಯಲ್ಲಿ ಇರುವುದರಿಂದ ಎಲ್ಲರಿಗೂ ಉಪಯೋಗವಾಗುವದಿಲ್ಲ. ಆದುದರಿಂದ ಬೀಜಗಣಿತದ ಸಮೀಕರಣಗಳನ್ನು ಕಲೆ ಹಾಕಿ ತಿಳಿಸಿ ಹೇಳಲು ಪ್ರಯತ್ನಿಸಲಾಗಿದೆ". ಎಂದು ತಮ್ಮ ನಿಲುವೆಯನ್ನು ವ್ಯಕ್ತ ಪಡಿಸಿದ್ದಾರೆ.

ಚೆನ್ನಬಸಪ್ಪನವರ ಶಿಷ್ಯರಾದ ಚುರುಮುರಿ ಶೇಷಗಿರಿರಾಯರು "ಕಾನಡೀ ಭಾಷಾ" ಎಂಬ ಮರಾಠಿ ಲೇಖ; "ಜೈಮಿನಿ ಭಾರತ"ದ ಪೀಠಿಕಾ ಸಂಧಿ. "ಸ್ಫುಟ ವಿಷಯ-ಬಹಿಲಾರ್ಪಿಕಾ (ಕೋಡೀ)" ಕವಿತೆಗಳನ್ನು ಬರೆದು" 'ವಿವಿಧ ಜ್ಞಾನ ವಿಸ್ತಾರ' ಪತ್ರಿಕೆಯಲ್ಲಿ ೧೮೬೭-೬೮ರಲ್ಲಿ ಪ್ರಕಟಿಸಿದರು. "ಕಾನಡೀ ಭಾಷಾ" ಲೇಖದಲ್ಲಿ ಕನ್ನಡ-ಬಾಲ ಭಾಷಾ-ಮರಾಠಿ ಶಬ್ದಗಳಲ್ಲಿಯ ಸಮಾಂತರ ಶಬ್ದಗಳ ಪಟ್ಟಿಯನ್ನೇ ಉದ್ಧರಿಸಿರು

ವರು. ಮಾತ್ರವಲ್ಲ ಕನ್ನಡ-ಮತ್ತು-ಲ್ಯಾಟಿನ್ ಭಾಷೆಗಳಲ್ಲಿ ಪ್ರಯೋಗಿಸುವ ಶಬ್ದ ಸಂಗ್ರಹವನ್ನೂ ಎತ್ತಿ ತೋರಿಸಿರುವರು. ಈ ಈರ್ವರು ಧಾರವಾಡದವರು ಎಂದು ಪ್ರತ್ಯೇಕವಾಗಿ ಹೇಳಬೇಕಿಲ್ಲ.

ವಿಜಾಪುರ ಜಿಲ್ಲೆಯ ಜಮಖಂಡಿಯ ಮಹರ್ಷಿ ವಿಠ್ಠಲ ರಾಮಜೀ ಶಿಂಧೆ (೧೮೭೩-೧೯೪೪)ಇವರನ್ನು ಮಹಾರಾಷ್ಟ್ರದಲ್ಲಿ "ಸಮಾಜ ಸುಧಾರಕರು, ಅಸ್ಪೃಶ್ಯ ನಿವಾರಣೆಯ ಪುರಸ್ಕರ್ತರು, ಧರ್ಮತತ್ವಗಳ ಸಂಶೋಧಕರು, ಧ್ಯೇಯವಾದಿ ವಿದ್ವಾಂಸ"ರೆಂದು ಅವರ ಚರಿತ್ರಕಾರರು ಬಣ್ಣಿಸುವರು. ಶಿಂಧೆ ಅವರು "ಕಾನಡೀ ಮರಾಠಿ"ಭಾಷೆಗಳ ವ್ಯಾಕರಣಗಳಲ್ಲಿ ಇರುವ ಮಧುರ ಬಾಂಧವ್ಯ ಕುರಿತು ಲೇಖಗಳನ್ನು ಈ ಶತಮಾನದ ಪೂರ್ವಾರ್ಧದಲ್ಲಿ ಲೋಕಮಾನ್ಯ ತಿಲಕರ "ಕೇಸರಿ" ಪತ್ರಿಕೆಯಲ್ಲಿ ೧೯೨೩ರಲ್ಲಿ ಪ್ರಕಟಿಸಿದರು. ಪ್ರಸ್ತುತ ನನ್ನ ಲೇಖನಕ್ಕೆ, ಮಹರ್ಷಿ ಶಿಂಧೆ ಅವರ ಲೇಖನ ಹಿನ್ನೆಲೆಯಾಗಿದೆ.

ಅನೇಕ ಪ್ರಾಕೃತ ಭಾಷಾ ವಿದ್ವಾಂಸರಾದ ಜೈನ ಆಚಾರ್ಯ ಮುನಿ ವಿಜಯಜೀ "ಜ್ಞಾನೇಶ್ವರಿಯಲ್ಲಿ ಬಳಸಲಾದ ಮರಾಠಿ ಭಾಷೆ ಪ್ರಾಕೃತ ಭಾಷೆ ಅರಿತ ಪಂಡಿತನಿಗೆ ಯಾವ ಬಗೆಯಿಂದ ತಿಳಿದುಕೊಳ್ಳಲು ಕಠಿಣ; ಅದೇ ರೀತಿ ಇತ್ತೀಚೆಯ ಮರಾಠಿ ಭಾಷಾ ಪಂಡಿತನಿಗೂ ಅಷ್ಟೇ ಕಠಿಣವಾಗಿರುವದು. ಇದರ ತಾತ್ಪರ್ಯ ಜ್ಞಾನೇಶ್ವರಿಯ ಮರಾಠಿ ಭಾಷೆ ಪುರಾತನ ಪ್ರಾಕೃತ ಭಾಷೆಗಿಂತ ಇತ್ತೀಚೆಗಿನದು ಮಾತ್ರವಲ್ಲ ಇತ್ತೀಚೆಗಿನ ಬಳಕೆಯಲ್ಲಿರುವ ಮರಾಠಿ ಭಾಷೆಗಿಂತ ಮೊದಲಿನದಾಗಿದೆ. ಹಿಂದೀ, ಗುಜರಾತಿ, ಮತ್ತು ಬಂಗಾಲಿ ಭಾಷೆಗಳಲ್ಲಿ ಅರ್ವಾಚೀನ ಭಾಷೆಗಳೊಡನೆ; ಮೊದಲಿನ ಪ್ರಾಕೃತ ಭಾಷೆಯ ಹತ್ತಿರದ ಸಂಬಂಧ ಕಂಡುಬರುವದು. ಆದರೆ ಮರಾಠಿ ಭಾಷೆಯಲ್ಲಿ ನಮಗೆ ಈ ಬಗೆಯದಾಗಿ ಕಡಿಮೆ ಪ್ರಮಾಣದಲ್ಲಿ ತೋರುವದು. ಇದಕ್ಕೆ ಕಾರಣವೇನಂದರೆ ಮರಾಠಿ ಭಾಷೆ, ಕನ್ನಡದ ಬಳಿಕ, ಮತ್ತು ಕನ್ನಡ ಭಾಷೆಯ ಗರಡಿಯಲ್ಲಿ ಆಜ್ಞಾಧಾರಕಳಾದ ಅತ್ತೆ ಮನೆಯ ಸೊಸೆಯಂತೆ ಬೆಳೆದು ಬಂದಿದೆ. ಅಲ್ಲದೆ ಕನ್ನಡದ ಪ್ರಭಾವ ಸಾಕಷ್ಟು ಉಂಟಾಗಿದೆ" ಎಂದು ಅಭಿಪ್ರಾಯ ವ್ಯಕ್ತಪಡಿಸಿರುವರು.

ಮರಾಠಿ ವಾಙ್ಮಯ ಕುರಿತು ಹನ್ನೆರಡನೆಯ ಶತಮಾನಕ್ಕಿಂತ ಮೊದಲು ಬರೆದ ಶಿಲಾಲೇಖಗಳು ಉಪಲಬ್ಧವಿದ್ದುದು, ಇನ್ನೂ ವರೆಗೆ ದೊರೆತುದು, ತೋರುವದಿಲ್ಲ. ಆದರೆ ಕನ್ನಡ ಭಾಷೆ ಇತಿಹಾಸವು ಬೇರೆ ರೀತಿಯದಾಗಿದೆ. ತಾರೀಖು ೨೩-೭-೬೧೩ ರ ಒಂದು ಶಿಲಾಲೇಖದಲ್ಲಿ ರವಿಕೀರ್ತಿ ಎಂಬ ಜೈನ ಕವಿಯ ಉಲ್ಲೇಖವಿದೆ. ಅಲ್ಲದೆ ಅವನು ಭಾರವಿ ಮತ್ತು ಕಾಲಿದಾಸರ ಯೋಗ್ಯತೆಯ ಪಂಡಿತನಾಗಿದ್ದನು ಎಂಬ ವಿವರವಿರುವದು.

"ಕಾವೇರಿಯಿಂದ ಗೋದಾವರಿವರೆಗೆ ಕರ್ನಾಟಕ ರಾಜ್ಯ; ಕನ್ನಡ ಭಾಷೆ ಹಬ್ಬಿಕೊಂಡಿದೆಂದು, ವಕ್ಲಂದ (ಬೆಳಗಾಂವ) ಮತ್ತು ಕೊಪ್ಪಳ ನಡುವಿನ ಪ್ರದೇಶಗಳಲ್ಲಿ ಅತಿ ಉತ್ಕೃಷ್ಟ ಕನ್ನಡ ಭಾಷೆ ಪ್ರಚಾರದಲ್ಲಿದ್ದ ಸಂಗತಿ ಅಮೋಘವರ್ಷ ಉರ್ಫ ನೃಪತುಂಗ ಅಥವಾ ಶಿವ ಈ ರಾಜನ "ಕವಿರಾಜಮಾರ್ಗ" ಗ್ರಂಥದಲ್ಲಿದೆ ಎಂಬುದು ಪ್ರೊ. ಪಾಠಕ ಇವರ ಅಭಿಪ್ರಾಯವಾಗಿದೆ.

ಸ್ಥೂಲವಾಗಿ ಹೇಳುವದಾದರೆ ಹನ್ನೆರಡನೆಯ ಶತಮಾನದ ವರೆಗೆ ಕನ್ನಡ ಭಾಷೆಯ ಪ್ರಚಾರ ಮಹಾರಾಷ್ಟ್ರದಲ್ಲಿ ನಡೆದು ಬಂದಿತ್ತು. ದೇವಗಿರಿ ಯಾದವ ಮಹಾದೇವ ರಾಜನ ಕಾಲದಲ್ಲಿ ಮಹಾರಾಷ್ಟ್ರದಲ್ಲಿ ರಾಜಕೀಯ ಮತ್ತು ವಾಙ್ಮಯ ಕ್ರಾಂತಿ ಆರಂಭವಾದುದರಿಂದ ಕನ್ನಡ ಭಾಷೆ ದಕ್ಷಿಣದೆಡೆಗೆ ನೆಲೆಯೂರಿತು.

"ಕನ್ನಡ ಭಾಷೆಯ ಘನತೆ ಅದರ ಲಿಪಿಯಲ್ಲಿ ಅಡಗಿದೆ. ಕ್ರಿ. ಪೂ. ಕದಂಬ ವಂಶದ ಓರ್ವ ರಾಜನು ದಕ್ಷಿಣದ ಸ್ವಾರಿಯ ಕಾಲದಲ್ಲಿ ಮಗಧ ದೇಶದಿಂದ ಬ್ರಾಹ್ಮಿ ಲಿಪಿಯನ್ನು ತಂದನು. ಕಾಲಾಂತರ ವಿಕಾಸಗೊಂಡ ಈ ಲಿಪಿ ಕನ್ನಡ ಮತ್ತು ತೆಲಗು ಲಿಪಿಗಳಲ್ಲಿ ಮಾರ್ಪಾಡಾಗೊಂಡವು." ಎಂಬ ಅಭಿಪ್ರಾಯ ಭೂಲರ ಎಂಬ ಸಂಶೋಧಕನದಾಗಿದೆ. ಹನ್ನೊಂದನೆಯ ಶತಮಾನದಲ್ಲಿಯ ಬಾಲಬೋಧ ಮತ್ತು ಇತ್ತೀಚಿಯ ಕನ್ನಡ ವರ್ಣಮಾಲೆಗಳಲ್ಲಿ ಸಾಕಷ್ಟು ಸಾಮ್ಯವಿದೆ; ಉದಾ–ಗ–ಣ–ಕ-ದ-ಧ-ನ–ಶ–ಖ.

ಹದಿನಾಲ್ಕರಿಂದ ಹದಿನೇಳನೆಯ ಶತಮಾನದವರೆಗೆ ಮಹಾರಾಷ್ಟ್ರವು ಮುಸಲಮಾನರಿಯಾಸತಗೆ ಒಳಗಾಗಿದ್ದುದು ಐತಿಹಾಸಿಕ ಸಂಗತಿ. ಇದರ ಪ್ರಭಾವದಿಂದ ಅರಬಿ, ಪಾರಸಿ, ಉರ್ದೂ ಭಾಷೆಗಳ ಶಬ್ದಗಳು ಮರಾಠಿ ಶಬ್ದಕೋಶದಲ್ಲಿ ಸೇರಿಕೊಂಡವು. ಹದಿನೇಳನೆಯ ಶತಮಾನದಲ್ಲಿ ದರಬಾರದ ಭಾಷೆ ಮುಸಲಮಾನರ ಭಾಷೆಯದಾಗಿದ್ದು ಕೇವಲ ಧಾರ್ಮಿಕ ಗ್ರಂಥ ಮತ್ತು ಗೃಹಿಣಿಯರ ಮೂಲಕ ಮರಾಠಿ ಭಾಷೆ ಉಳಿದು ಬಂದಿತು. ಪೇಶವಾಯಿ ರಾಜರ ಆಡಳಿತ ಕಾಲದಲ್ಲಿ ಮರಾಠಿ ಭಾಷೆಯಲ್ಲಿ ತತ್ಸಮ ಶಬ್ದಗಳು ಪ್ರವೇಶ ಹೆಚ್ಚಾಗಿ ಪಡೆದವು.

ಮುಸಲಮಾನರ ಭಾಷೆ, ಪರಕೀಯರ ಭಾಷೆ. ಹೀಗಾಗಿ ಧಾರ್ಮಿಕ ಮತ್ತು ಮನೆಯಲ್ಲಿ ಮಾತನಾಡುವ ಭಾಷೆಯ ಸ್ಥಾನ ಪಡೆಯಲಿಲ್ಲ. ಕನ್ನಡ ಭಾಷೆ ಸ್ವಕೀಯವಾದುದರಿಂದ ಮನೆ ಮಾತು, ದೇವರ ಮನೆ, ಅಡಿಗೆಮನೆ, ಜೋಕಾಲಿ ಆಟ ಆಡುವಾಗ್ಗೆ ಬಳಕೆಯಲ್ಲಿ ಉಳಿದುಕೊಂಡಿತು.

ಚಾಲುಕ್ಯರು ಕ್ರಿ. ಶ. ೫ ಮತ್ತು ೬ ರಲ್ಲಿ ಉಂಟುಮಾಡಿದ ಪ್ರಭಾವ, ತದನಂತರದ ರಾಜರು ಕನ್ನಡ ಇಲ್ಲವೆ ತೆಲಗು ಭಾಷಿಕರಾಗಿದ್ದರು; ಕನ್ನಡ ಭಾಷೆಯ ಪ್ರಚಾರ ಗೋದಾವರಿಯ ದಂಡೆಯವರೆಗೆ ಹಬ್ಬಿಕೊಂಡಿತು. ಉದಾ: ದೇವರಕೋಡೆ. ಕೊಯಿಲಕೊಂಡೆ, ಗೋವಳಕೊಂಡೆ, ಇವುಗಳು ನಿಜಾಮುಶಾಹಿ ಪೂರ್ವಭಾಗ ಅಲ್ಲದೆ ಇಂದೂರ, ತಂದೂರ, ಮಾಹೂರ, ದಾರೂರ, ಎಲ್ಲೂರ (ವೆರೂಳ), ಕಲ್ಯಾಣ, ಕರಹಾಟಕ ಇತ್ಯಾದಿ ಹೆಸರುಗಳು ಭೀಮಾತೀರ, ಗಂಗಾತೀರದಲ್ಲಿವೆ. ಇದೆಲ್ಲವೂ ಕನ್ನಡ ಭಾಷೆಯ ಪ್ರಭಾವವನ್ನು ಸೂಚಿಸುವವು. ಕೇವಲ ಸ್ಥಳನಾಮವಲ್ಲದೇ ಐತಿಹಾಸಿಕ ಪುರುಷರ ಹೆಸರು ಸಹ ಕನ್ನಡ ಹಿನ್ನೆಲೆಯುದಿದ್ದುದು ಕಂಡುಬರುವದು; ಉದಾ: ಪುಲಕೇಶಿ (ಚಾಲುಕ್ಯ), ಬಡ್ಡಿಗ, ಕಕ್ಕಲ (ರಾಷ್ಟ್ರಕೂಟ), ಧಾಡಿಯಪ್ಪಾ, ವಡ್ಡಿಗ, ಜೀಜಾವು (ಯಾದವ) ವಿಠೋಬಾ, ಬಸವಣ್ಣಾ, ಜಯಪ್ಪಾ (ಶಿಂಧೆ), ವೆಂಕೋಜಿ (ಭೋಸಲೆ) ಇತ್ಯಾದಿ

ಬಾದಾಮಿ ಮತ್ತು ಕಲ್ಯಾಣ ಚಾಲುಕ್ಯರ ನಂತರದ ಮಾಳಖೇಡದ ರಾಷ್ಟ್ರಕೂಟರು ಕನ್ನಡಿಗರು. ಮೈಸೂರಿನ ಗಂಗವಾಡಿ ರಾಜರ ಕಾಲದಲ್ಲಿ ಜೈನ ಮತದ ವರ್ಚಸ್ಸು ಅಧಿಕವಾಗಿದ್ದು ಸಂಸ್ಕೃತ ಮತ್ತು ಕನ್ನಡ ವಾಙ್ಮಯ ಪ್ರಚಾರ ದಕ್ಷಿಣ ಮತ್ತು ಪಶ್ಚಿಮ ಹಿಂದುಸ್ಥಾನದ ಭಾಗಗಳಲ್ಲಿ ರಭಸದಿಂದ ಉಂಟಾದುದು ಕಾಣುವದು. ಕೇವಲ ಕನ್ನಡ ಭಾಷೆ ಅಲ್ಲದೆ ತಮಿಳ, ತೆಲುಂಗು, ಮಲಯಾಳಿ ಭಾಷೆಗಳಿಗೂ ಎತ್ತರದ ಸ್ಥಾನ ದೊರಕಿತು. ಪೂಜ್ಯಪಾದ ವಿಜಗೀಷು ಅಚಾರ್ಯರು(ಕ್ರಿ ಶ ನಾಲ್ಕನೆಯ ಶತಮಾನ) ಬೇರೆ ಬೇರೆ ರಾಜ್ಯಗಳಲ್ಲಿ ಸಂಚಾರ ಕೈಕೊಂಡು ಮಠ ಸ್ಥಾಪಿಸುತ್ತಿದ್ದರು. ಪಾಲಿ, ಮಹಾರಾಷ್ಟ್ರ ಭಾಷೆಗಳ ಮಹತ್ವ ಕಡಿಮೆಯಾಯಿತು. ಸಾಮಾನ್ಯ ಮತ್ತು ವಿದ್ವಾಂಸರ ಮೇಲೆ ಪರಿಣಾಮವನ್ನುಂಟು ಮಾಡಲು ಸಂಸ್ಕೃತ, ಕನ್ನಡ ವಾಙ್ಮಯದ ನೆರವು ಪಡೆದು ಈ ಭಾಷೆಗಳ ಅಭಿವೃದ್ಧಿ ಕೈಕೊಂಡರು.

ಜ್ಞಾನೇಶ್ವರರ "ಅಮೃತಾನುಭವ" ಗ್ರಂಥದಲ್ಲಿ ಬಳಸಿದ ಆಡವಿ (ಅರಣ್ಯ), ನೀಂದ (ನೀಜ), ಉಪೇಗೀ (ಉಪಯೋಗಿ) ಮಾ-ಮತ್ತು (ಮಗ), ಆಣಖೀ-ಅಪಾಡ-ಪಾಡ (ಚಾಂಗಲೆ), ಬೋಣ (ನೈವೆದ್ಯ) ಮಶೀ(ಸ್ಯಾಹೀ), ಭಾಂಗಾರ (ಸೋನೆ), ಆಯಿತಾ (ಅಸಲೆಲಾ) ಈ ಕನ್ನಡ ಶಬ್ದಗಳು ಆಧುನಿಕ ಮರಾಠಿ ಭಾಷೆಯಲ್ಲಿ ಪ್ರಚಲಿತ ಇರುವದಿಲ್ಲ, ಆದರೆ ಮೊಳೀ-ಮೊಟ್ಟೆ (ಮೋಟ) ಸಗಟ–ಸಂಗಡ (ಸಹಿತ), ಉಗಳೀ (ಓಕ), ಪಳಹ (ಕಾಪೂಸ), ಮುಗ–ಮುಕ್ತ (ಮುಕಾ) ಇತ್ಯಾದಿ ಶಬ್ದಗಳು ಆಧುನಿಕ ಮರಾಠಿ ಭಾಷೆಯಲ್ಲಿ ಬಳಕೆಯಲ್ಲಿವೆ. (ಸೂಚನೆ:–ಕಂಸದಲ್ಲಿ ಉಲ್ಲೇಖಿಸಿದ ಶಬ್ದಗಳು ಮರಾಠಿ ಭಾಷೆಗೆ ಸಂಬಂಧ ಪಟ್ಟುದಾಗಿವೆ).

ಭಾಷೆಗಳಲ್ಲಿ ಪರಸ್ಪರ ನಾಮವಾಚಕ ಇಲ್ಲವೆ ವಿಶೇಷಣ ವಾಚಕ ಕೊಡುತೆಗೆದುಕೊಳ್ಳು ವದು, ಶಬ್ದಗಳ ಮುಖಾಂತರ ಸಹಜವಾಗಿ ಅಸ್ತಿತ್ವದಲ್ಲಿದ್ದುದು ಕಂಡು ಬರುವದು. ಆದರೆ ಕ್ರಿಯಾವಾಚಕ ಶಬ್ದಗಳ ಕೊಡುತೆಗೆದುಕೊಳ್ಳುವದು ಅಷ್ಟೊಂದು ಸಾಗು ವದು ವಿರಳ. ಏಕೆಂದರೆ ಧಾತು ಶಬ್ದಗಳು ಆಯಾ ಭಾಷೆಗಳ ಸಾರಸರ್ವಸ್ವವಾಗಿರು ತ್ತವೆ. ಆದರೆ ಕನ್ನಡದ ಸಾಕಷ್ಟು ಕ್ರಿಯಾಪದಗಳು ಇತ್ತೀಚೆಯು ಮರಾಠಿ ಭಾಷೆಯಲ್ಲಿ ಬಳಕೆಯಲ್ಲಿದ್ದುದು ಕಾಣುವದು. ಉದಾ:-ಕುಟ್ಟು (ಕನ್ನಡ) =ಮಾರಕೂಟ (ಮ), ತಬ್ಬು (ಕ)=ದಾಬ (ಮ); ಸರೀ (ಕ) =ಸರಕ (ಮ); ಬಡಿಸು (ಊಟ) (ಕ)= (ಜೇವಣ)ವಾಢ (ಮ); ಬೊಗ್ಗು (ಕ)—ವಾಕ (ಮ); ಬಡಿ-ತುಳಿ (ಕ)—ತುಡವ (ಮ); ತುಂಬು (ಕ)—ಭರ (ಮ); ಕಲಸು(ಕ)—ಕಾಲವ (ಮ); ಉಗಳು(ಕ)— ಥುಂಕ(ಮ); ಜಿಜ್ಜು(ಕ)—ಚೆಚ(ಮ); ಅಪ್ಪಳಿಸು (ಕ)—ಆಪಟ(ಮ); ಕೆದರು (ಕ)—ಖರಡ(ಮ); ಒದರು(ಕ)—ಓರಡ(ಮ); ಕೊರಿ (ಕ)—ಕೋರ(ಮ); ಕಿಲಬು(ಕ)—ಕಳಕ(ಮ); ತಿಳಿಸು(ಕ)—ಕಳೀವ(ಮ); ಹೆದರು(ಕ)—ಬೇಥರ(ಮ) ಇತ್ಯಾದಿ.

ಕನ್ನಡ-ಮರಾಠಿ ಭಾಷೆಗಳ ಆನುವಂಶಿಕ ಸಂಬಂಧವಿಲ್ಲದೆ ಕೆಳಗೆ ತೋರಿಸಿದ ಶಬ್ದ ಗಳು ಬಳಕೆಯಲ್ಲಿರುವದು ಅಸಂಭನೀಯ, ಉದಾ:-ಶರೀರದ ಅವಯುವಗಳು; ಆಪ್ತರು. ಪ್ರತಿಯೊಂದು ಭಾಷೆಯ ವ್ಯವಹಾರಕ್ಕೆ ಇಂತಹ ಶಬ್ದಗಳ ಬಳಕೆ ಅನಿ ವಾರ್ಯ. ಹೀಗಾಗಿ ಎರಡು ಭಾಷೆಗಳಲ್ಲಿ ಈ ಬಗೆಯ ಶಬ್ದ ಪ್ರಯೋಗ ಕಂಡು ಬಂದರೆ, ವಯೋಮಾನದಲ್ಲಿ ಯಾವ ಭಾಷೆ ಹಿರಿಯದೊ, ಅದರೊಡನೆ ಚಿಕ್ಕವಯು ಸ್ಸಿನ ಭಾಷೆಯು ಹತ್ತಿರದ ಸಂಬಂಧ ಉಂಟಾಗಿದೆ ಎಂಬುದನ್ನು ಮಾನ್ಯ ಮಾಡಲೇ ಬೇಕಾಗುವದು. ಉದಾ:-ಅವ್ವಾ(ಕ)-ಆಈ-ಆವಾ-ಆವೂ(ಮ); ಅಪ್ಪಾ(ಕ)—ಬಾಪ —ಅಪ್ಪಾ—ಆಬಾ(ಮ); ಅಕ್ಕಾ(ಕ)—ಅಕ್ಕಾ—ಮೋಠೀಬಹೀಣ(ಮ); ತಂಗಿ(ಕ)— ಲಹಾನ ಬಹೀಣ(ಮ); ಅಣ್ಣಾ(ಕ)—ಅಣ್ಣಾ—ಮೋಠಾ ಭಾವು(ಮ); ತಮ್ಮ(ಕ)- ಲಹಾನ ಭಾವು(ಮ); ದೊಡ್ಡ(ಕ)—ದಾದಾ(ಮ); ನನ್ನ(ಕ)—ನಾನಾ(ಮ); ತಾಯಿ(ಕ)—ತಾಯೀ—ಆಯೀ-ತಾಯಿ (ಮ); ತಂದಿ(ಕ)—ಬಾಪ—ತಾತ(ಮ); ಅತ್ತೆ(ಕ)—ಅತೆ(ಮ); ಕಕ್ಕ(ಕ)—ಕಾಕಾ(ಮ); ಮಾವ(ಕ)—ಮಾವಶಾ(ಮ);ಅಜ್ಜ (ಕ)—ಆಜಾ(ಮ).

ಶರೀರದ ಅವಯುವಗಳನ್ನು ಕುರಿತು-ಬಟ್ಟು(ಕ)—ಬೊಟ(ಮ); ಹೊಟ್ಟೆ (ಕ)—ಪೊಟ (ಮ) ; ಗಲ್ಲ (ಕ)-ಗಾಲ (ಮ); ಮಾಂಡಿ (ಕ)-ಮಾಂಡೀ (ಮ;) ಪಿಂಡ್ರಿ (ಕ)-ಪಿಂಡ್ರೀ

(ಮ); ಕೊಳ್ಳ (ಕ) —ಗಳಾ (ಮ); ತಲೇ (ಕ) —ಟಾಳೂ (ಮ); ಬಗಲ (ಕ)-ಬಗಲಾ-ಬಾಜೂ; (ಮ). ಶಿರಾ (ಕ) -ಶಿರ (ಮ); ಎದಿ (ಕ) -ಛಾತೀ (ಮ); ಝಿಪರೀ (ಕ)-ಕೇಸ-ಝಿಪರೀ (ಮ)

ಅವ್ಯಯಗಳು:- ಕಡತ (ಕ) -ವರ (ಮ); ಕೆಳಕ (ಕ) -ಖಾಲೀ (ಮ); ಇತ್ತ್ರಕಡೆ (ಕ)-ಇಕಡೆ(ಮ); ಅತ್ತ್ರಕಡೆ (ಕ)-ತಿಕಡೆ (ಮ); ಇಷ್ಟು (ಕ)-ಇತುಕೆ-ಎತುಲೆ (ಮ); ಲಗು-ಲಘು (ಕ)-ಲವಕರ (ಮ); ಬೇಗನೆ (ಕ)-ಬಿಗಿಬಿಗಿ-ಲವಕರ (ಮ); ಇತ್ಯಾದಿ.

ಪ್ರಾಕೃತದ ಪ್ರಭಾವದ ಹಿನ್ನೆಲೆಯಲ್ಲಿ ಮರಾಠಿ ಭಾಷೆಯ ಬೆಳವಣಿಗೆ, ಕನ್ನಡ ಭಾಷೆಯ ಸಾನ್ನಿಧ್ಯದಲ್ಲಿ ರೂಪಗೊಂಡುದು, ಆಧುನಿಕ ಮರಾಠಿ ವ್ಯಾಕರಣದಲ್ಲಿ ಕಾಣುವ ಸಾಮ್ಯ ಪ್ರಮುಖವಾಗಿದೆ. ಈ ಸಂಗತಿ ಹೆಚ್ಚಾಗಿ ನಾಮ ಮತ್ತು ಕ್ರಿಯಾ ಪದಗಳ ವಿಭಕ್ತಿಯಲ್ಲಿ ಕಂಡುಬರುವದು. ಕನ್ನಡದಲ್ಲಿ ನಾಮದ ವಿಭಕ್ತಿರೂಪ ಉಂಟಾಗುವದು ಶಬ್ದದ ಮೂಲರೂಪಕ್ಕೆ ಅನುಸರಿಸಿದೆ. ಇವನು(ಹಾ),ಅವನು(ತೊ) (ಕನ್ನಡ-ಮರಾಠಿ ಕ್ರಮಶಃ) ಈ ಅರ್ಥದ ಸರ್ವನಾಮಗಳಿಗೆ ಅದರ ವಿಭಕ್ತಿ ಜೋಡಿಸಿಕೊಂಡು ವಾಕ್ಯರಚನೆ ಉಂಟಾಗುವದು. ಹಳೆಯ ಮರಾಠಿಯಲ್ಲಿ ನಾವು ಸೂಕ್ಷ್ಮ ನಿರೀಕ್ಷೆ ಮಾಡಿದಲ್ಲಿ ವಿಭಕ್ತಿರೂಪ ಘೋಡಿಯಾಚಾ, ಪಾಣಿಯಾಂತ, ವಾಳಿಯಾಲಾ, ಎಂದೂ, ಇಯಾಚಾ, ಇಯಾಂತ, ಇಯಾಲಾ ಇವುಗಳಿಗೆ 'ಈ' ಸರ್ವನಾಮರೂಪ ಅಂಟಿಕೊಂಡುದು ಕಂಡುಬರುವದು. ಮರಾಠಿಯ "ಈ" ಕನ್ನಡವ 'ಹಾ' ಎಂಬ ಅರ್ಥದ ದರ್ಶಕ ಸರ್ವನಾಮ ವಾಚಕ ಶಬ್ದವಾಗಿದೆ. 'ಗುರು' ಶಬ್ದಕ್ಕೆ 'ಈ' ಸರ್ವನಾಮ ವಿಭಕ್ತಿಯ ರೂಪ ಜೋಡಿಸಿದರೆ ಕನ್ನಡದಲ್ಲಿ ಗುರುವಿನಗೆ (ದ್ವಿತಿಯಾ), ಗುರುವಿನಿಂದ(ತೃತಿಯಾ), ಗುರುವಿನ (ಷಷ್ಟಿ)ಗಳು ಕಾಣುವವು. ಮಹಾರಾಷ್ಟ್ರದ ಕರಾವಳಿಯಲ್ಲಿ ಸಹ ಕನ್ನಡ ಭಾಷೆ ಪ್ರಚಾರದಲ್ಲಿ ಇದ್ದುದು 'ಘೋಡಯೇಕ' (ಏಕವಚನ), 'ಘೋಡ್ಯಾಂಕ' (ಅನೇಕ ವಚನ) ಈ ಬಗೆಯ ಚತುರ್ಥಿರೂಪ ಉಂಟಾಗುವದು, ಅಲ್ಲದೆ 'ಕ' ಪ್ರತ್ಯಯ ಕನ್ನಡದ್ದಾಗಿದೆ ಎಂಬುದರ ಉದಾಹರಣೆ ಸಾಕ್ಷಿಯಾಗಿದೆ.

ಕನ್ನಡದಲ್ಲಿ "ಅಣ್ಣಾ ಅವರು ಬಂದರು" ಅಥವಾ "ಅಣ್ಣಾನವರು ಬಂದರು" ಎಂಬುದು ಮರಾಠಿ "ಅಣ್ಣಾತೆ ಆಲೆ" ಎಂದು ಪ್ರಯೋಗಿಸಲಾಗಿದೆ. ಆದರೆ ಬೆಂಗಳೂರು, ಮೈಸೂರುಗಳಲ್ಲಿ ಇರುವ ಮರಾಠಿ ಭಾಷಿಕರು "ಅಣ್ಣಾ ತ್ಯಾನೀ ಆಲೆ" ಎಂದು ಪ್ರಯೋಗಿಸುವ ಪರಿಪಾಠವಿದೆ. ತ್ರಂಬಕನೆಂಬ ಮರಾಠಿ ಕವಿ ಕ್ರಿ. ಶ. ೧೫೦೦ ರಲ್ಲಿ ತನ್ನ "ಬಾಲಬೋಧ" ಎಂಬ ಗ್ರಂಥದಲ್ಲಿ "ಭಲೆತೆಣೆ ಏಥ ನಾವೆ, ಪ್ರಯಾಗೀ ಮಾಧವೀ ವಿಶ್ವರೂಪೊ ತೆ ಪಹಾವೆ, ಏತುಲೆಸೀ ಸಂಸಾರಾ ದೇಯಾವೆ

ತಿಲೋದಕ" ಇಲ್ಲಿ "ಭಲಾ" ಈ ಶಬ್ದಕ್ಕೆ ಕವಿಯು ಸರ್ವನಾಮದ ತೃತೀಯೇದ ರೂಪ ಜೋಡಿಸಿರುವದು ಕಾಣುವದು. ಹೀಗಾಗಿ "ಭಲ್ಯಾನೆ" ಎಂದು ಪ್ರಯೋಗಿಸುವ ಬದಲು "ಬಲೆತೆಣೆ" ಎಂದು ಬಳಸಿದುದು ಕನ್ನಡ ವ್ಯಾಕರಣದ ಪ್ರಭಾವವಾಗಿದೆ. ಹಳೆಯ ಮರಾಠಿಯಲ್ಲಿ ಸಾಮಾನ್ಯ ರೂಪದ ಸಂಬಂಧ ಯಾವ ಬಗೆಯದಾಗಿದೆಯೋ, ಅದೆ ರೀತಿಯ ಸಂಬಂಧ ಕನ್ನಡದಲ್ಲಿ ಕಾಣುವದು. ಉದಾ: -"ಮನುಷ್ಯನ" ಈ ಷಷ್ಠಿ ರೂಪ; ಮಾತ್ರವಲ್ಲ ಇದಕ್ಕೆ ಪ್ರತ್ಯಯವನ್ನು ಅಂಟಿಸಲು, ಮನುಷ್ಯನನ್ನು (ದ್ವಿತಿಯಾ) ಮನುಷ್ಯನಿಂದ (ತೃತೀಯಾ), ಮನುಷ್ಯನಿಗೆ (ಚತುರ್ಥಿ) ರೂಪಗಳು ಕಾಣುತ್ತವೆ. ಹೀಗಾಗಿ ಈ ಬಗೆಯ ವಾಕ್ಯರಚನೆ ಪ್ರಚಾರ ಕನ್ನಡ ವ್ಯಾಕರಣದ ಪ್ರಭಾವದಿಂದ ಜನಿಸವಾಗಿರಲು ಬಹುದು. ಏಕೆಂದರೆ "ತ್ಯಾಜಲಾ, ಮಾಝ್ಯಾಚಾನೆ, ತು ಮುಚ್ಯಾಹೂನ" ಈ ಷಷ್ಠಿ ಪ್ರತ್ಯಯಕ್ಕೆ ಪುನಃ ಬೇರೆ ವಿಭಕ್ತಿ ಸೇರಿಕೊಂಡುದರಿಂದ ಬೇರೊಂದು ಪ್ರಕಾರದ ವಿಕಲ್ಪಗಳಾಗಿರುವದು. ಆದರೆ ಕನ್ನಡ ಷಷ್ಠಿಯ ರೂಪ ಒಂದು ಪ್ರಕಾರದ ಪ್ರಾದಿಪದೀಕವಾಗಿದೆ. "ಅಂತೆ" ಈ ಮರಾಠಿ ಶಬ್ದಕ್ಕೆ ಅವ್ಯಯ ಜೋಡಿಸಿ ಸಪ್ತಮಿಯಲ್ಲಿ ಪ್ರಯೋಗಿಸುವ "ಆಮುಚ್ಯಾ ಏಥೆ"; ತುಮುಚ್ಯಾ "ತಿಕಡೆ" ಮರಾಠಿ ವಾಕ್ಯಪ್ರಯೋಗಗಳು ಕನ್ನಡದಿಂದ ಬಂದಿರಲುಬಹುದು ಎಂಬ ಕಲ್ಪನೆ ಬರುವದು.

ಕನ್ನಡದಲ್ಲಿ ಸರ್ವನಾಮ ರೂಪದೊಡಗೂಡಿ ನಾಮದ ವಿಭಕ್ತಿ ಉಂಟಾಗುವದು. ಅದೇ ರೀತಿ ಕನ್ನಡದ "ಇರು" ಮರಾಠಿ "ಅಸ" ಈ ಧಾತುಗಳ ಬೇರೆ ಬೇರೆ ರೂಪಗಳಿಗೆ ಯಾವುದೆ ಧಾತುವಿನ ಭೂತಕಾಲ ವಾಚಕ ಅರ್ಥದ ರೂಪಗಳು ಕೃದಂತಕ್ಕೆ ತಗಲಿ ಆಯಾ ಧಾತುವಿನ ಅಥವಾ ಅರ್ಥದ ರೂಪಗಳು ಸಿದ್ಧವಾಗಿವೆ. ಇಂತಹ ಪ್ರಕಾರಗಳು ಸಂಸ್ಕೃತ, ಪ್ರಾಕೃತದಲ್ಲಿಯೂ ಕಂಡು ಬರುವವು. ಮರಾಠಿಯ ಹಿಂದಿನ ವರ್ತಮಾನಕಾಲದ "ಜಾಯಿ, ಪಾಹೆ" ಶಬ್ದಗಳು ಮೇಲೆ ಉಲ್ಲೇಖಿಸಿದಂತೆ ಕೃದಂತಕ್ಕೆ "ಅಸ" ಧಾತುವಿನ ರೂಪ ಅಂಟಿಕೊಂಡು "ಜಾತೊ, ಪಾಹತೊ" ಎಂಬ ಹೊಸ ವರ್ತಮಾನ ಉಂಟಾಗಿದೆ. ಇದಲ್ಲದೆ ಕನ್ನಡ ಧಾತು 'ತ' ಪ್ರತ್ಯಯದಲ್ಲಿ ಕೃದಂತವಾಗಿ 'ಇರು' ಧಾತುವಿನ ಮೂರೂ ಕಾಲದ ರೂಪಗಳು ಉಂಟಾಗುತ್ತವೆ. ಹಳೆಯ ಮರಾಠಿಯಲ್ಲಿ ಭವಿಷ್ಯಕಾಲದ ಪ್ರತ್ಯೇಕ ರೂಪಗಳು ಅಸ್ತಿತ್ವದಲ್ಲಿ ಇರಲಿಲ್ಲ. ಆದುದರಿಂದ ಇತ್ತೀಚೆಯ ಮರಾಠಿಯ ಭವಿಷ್ಯಕಾಲ ರೂಪಕ್ಕೆ ಕನ್ನಡದ ಭವಿಷ್ಯ ಕಾಲವು ಸಾಮ್ಯವಾಗಿದೆ. ಮರಾಠಿಯ ಭವಿಷ್ಯಕಾಲದ 'ಲ' ಕನ್ನಡದಿಂದ ಮರಾಠಿಯಲ್ಲಿ ಸೇರಿಕೊಂಡಿದೆ. ಉದಾ:-"ಮೀ ಕರೀನ (ಮಂ) = ನಾನು ಮಾಡುವೆನು" "ಆಮ್ಹೀ ಕರೂ" "ನಾವು ಮಾಡೋಣ" "ತೋ/ತೀ ಕರೀಲ = ಅವನು। ಅವಳು ಮಾಡುವನು। ಮಾಡುವಳು," = "ತೇ ಕರೀಲ-ಅದು ಮಾಡುವದು"

ಮರಾಠಿಯು ದ್ವಿತಿಯ ಪುರುಷರೂಪಗಳು ಸಂಸ್ಕೃತ ರೂಪಕ್ಕೆ ಸಮೀಪದ್ದಾಗಿ ತೋರು ವವು. ಉದಾ:-ವರ್ತಮಾನ ಕಾಲದ-ಮಾಡು = ಕರ(ಮ)ಧಾತು, ಇದರ "ಮಾಡುತ" ಎಂದು ಕೃದಂತವಾಗುವದು. ಮಾಡುತ ಕರೀತ ಇದ್ದಾನೆ (ಆಹೆ). ಮಾಡುತ್ತಾನೆ, ಕರೀತ ಆಹೆ(ಮ). ಕರಿತೊಯು (ಮಂ). ಕರಿತೊ (ಮ), ಹೀಗೆ ವರ್ತಮಾನ, ಕೃದಂತ ಮತ್ತು 'ಅಸ' ಧಾತುರೂಪ ಕೂಡಿಕೊಂಡು ಕನ್ನಡದಲ್ಲಿ ಭೂತಕಾಲವು 'ಅಸ' ಧಾತುವಿನ ನೆರವಿನಿಂದ ರಚನೆಯಾಗುವದು. ಆದರೆ ಮರಾಠಿಯಲ್ಲಿ ಬಂಗಾಲಿ ಭಾಷೆ ಯಂತೆ 'ಲ' ಪ್ರತ್ಯಯದ ಸಹಾಯ ಪಡೆದು ಭೂತಕಾಲ ರಚನೆಯಾಗಿದೆ ಎಂಬ ಕಲ್ಪನೆ ಬರುವದು. ಕನ್ನಡದ 'ತ' 'ದ' ವಾಗುವದು, ಬಳಿಕ 'ಇಳು' (ಅಸ) ಧಾತು ರೂಪದೊಡಗೂಡಿ ಭೂತಕಾಲ ರೂಪ ಸಿದ್ಧವಾಗುವದು ಉದಾ:"ಬಾಹೇರ ಪಾತಲೀ ಮುನೀಶ್ವರ ದುಹಿತಾ" ಇದರಲ್ಲಿಯ 'ಪಾತಲೀ' ಈ ಮರಾಠಿ ಶಬ್ದವು, ಕನ್ನಡದ "ಪೊದಳ" ಎಂಬ ಭೂತಕಾಲವಾಚಕ ಶಬ್ದಕ್ಕೆ ಸಾಮ್ಯವಿದೆ. ಮರಾಠಿಯ ಭೂತಕಾಲ "ಲ" ಕನ್ನಡದ ಭೂತಕಾಲದ "ನ-ದ-ರ" ದ ಪ್ರಭಾವದಿಂದ ಹೊರಬಂದಿವೆ ಎಂಬುದು ಖಚಿತವಾಗಿ ಪ್ರಮಾಣಿಸಲು ಬರುತ್ತದೆ. ಸಂಸ್ಕೃತದಲ್ಲಿ ಆಖ್ಯಾತ ಪ್ರತ್ಯಯ ಗಳಿಗೆ ಲಿಂಗವಿಕಾರ ಉಂಟಾಗುವದಿಲ್ಲ ಎಂಬುದನ್ನು ಇಲ್ಲಿ ನೆನೆಯಬೇಕು. ಇದಲ್ಲದೆ ಸಂಸ್ಕೃತದ ಪ್ರಭಾವಕ್ಕೆ ಒಳಗಾದ ಪ್ರಾರಂಭದ ಮರಾಠಿ ಕ್ರಿಯಾಪದ ಕಾಲಗಳಿಗೆ ಲಿಂಗ ವಿಕಾರಗಳಿರುವದಿಲ್ಲ. ಆಧುನಿಕ ಮರಾಠಿಯಲ್ಲಿ ಲಿಂಗ ವಿಕಾರವಿದ್ದುದು ತೋರುವದು; ಅದು ಸಹ ಕೇವಲ ಕೃದಂತ ವಿಶೇಷಣಗಳಿಗೆ ಲಿಂಗವಿಕಾರ ಉಂಟಾಗು ವದು. ಇದಕ್ಕೆ ಕಾರಣವು ಇದೆ; ಕೇವಲ ಕೃದಂತ ವಿಶೇಷಣಕ್ಕೆ ಲಿಂಗವಿಕಾರವಲ್ಲದೆ, ಈ ಬಗೆಯ ಲಿಂಗವಿಕಾರ ಕನ್ನಡದಲ್ಲಿ ರೂಢಿಯಲ್ಲಿವೆ. ಉದಾ:ಮರಾಠಿಯ (ಸುಂದರ, ತಿಖಟ, ಮಾಮೀಟ) -(ಸುಂದರ, ಖಾರ, ಕೆಟ್ಟುದುದು) ಇತ್ಯಾದಿ ಅಕಾರಾಂತ ವಿಶೇಷಣಗಳಿಗೆ ಲಿಂಗವಿಕಾರವಾಗುವದಿಲ್ಲ. ಸಂಯುಕ್ತ ಕ್ರಿಯಾಪದದ ಪ್ರಚಾರ ಮರಾಠಿ ಮತ್ತು ಕನ್ನಡದಲ್ಲಿ ಅಸ್ತಿತ್ವದಲ್ಲಿ ಒಂದೇ ಬಗೆಯಿಂದ ಇರುತ್ತವೆ. ಉದಾ:- ಕರೂನ ಸೋಡ(ಮ)-ಮಾಡಿಬಿಡು(ಕ); ಜೇವಣ ಕರೂನ ಸೋಡ-ಊಟ ಮಾಡಿಕೊ (ಕ), ಕರೂನ ಟಾಕ(ಮ)-ಮಾಡಿವಗಿ(ಕ,) ಇತ್ಯಾದಿ. ಮರಾಠಿಯ ಸಂಯುಕ್ತ ಕ್ರಿಯಾ ಪದ ಪ್ರಚಾರ ಕನ್ನಡದ ಸಂಯುಕ್ತ ಕ್ರಿಯಾಪದದೊಡನೆ ವಿಶೇಷವಾಗಿ ಪ್ರಭಾವ ಪಡೆದಿದೆ; "ನಯೆ" ಈ ಕ್ರಿಯಾಪದ ಕನ್ನಡದ "ಬಾರದು" ಶಬ್ದದ ಅನುಕರಣೆ ಯಾಗಿದೆ; ಬಾ(ಕ) = ಯೆ (ಮ) + ರಮ (ಕ) = ನಯೆ (ಮ,) ಇದು ನಕಾರಾರ್ಥಿ ಪ್ರತ್ಯಯ,

ಮರಾಠಿಯ ಭಾಷಾಶೈಲಿಯಲ್ಲಿ ಸಹ ಕನ್ನಡದ ಪ್ರಭಾವವಿದೆ. ಉದಾ : ಪಾಯಾತ ಜೋಡಾ (ಮ) = ಕಾಲಲ್ಲಿ ಚಪ್ಪಲಿ, (ಕ) ಅಂಗಾತ ಅಂಗರಖಾ (ಮ) = ಶರೀರದ ಮೇಲೆ ವಸ್ತ್ರ (ಕ), ಗಳ್ಯಾತ ಮಾಳ ಘಾಲಣೆ (ಮ) = ಕೊರಳಲ್ಲಿ ಮಾಲೆ ಹಾಕಿಕೊ (ಕ) ತೊಂಡಾತ ಮಾರಣೆ (ಮ) = ಮುಖಕ್ಕೆ ಹೊಡೆ (ಕ) ಪಾಠೀಶ. ಲಾಗಣೆ (ಮ) = ಬೆನ್ನತ್ತು (ಕ) ಪೋಟಾತ ಘಾಲಣೆ (ಮ) = ಅಪರಾಧ ಹೊಟ್ಟೆಯೊಳಗೆ ಹಾಕಿಕೊ (ಕ) ಥೊಳ್ಯಾ ಆಡಕರಣೆ (ಮ) = ಕಣ್ಣಿನ ಹಿಂದೆ ಮಾಡು (ಕ), ಜೀವಾವರ ಏಣೆ (ಮ) = ಜೀವದ ಮೇಲೆ ಬರುವದು (ಕ) ತ್ಯಾಲಾವಾಚಾಯಲಾ ಏತೆ (ಮ) = ಅವನಿಗೆ ಓದಲು ಬರುವದು (ಕ) ಈ ವಾಕ್ಯಗಳು ಶಬ್ದಶಃ ಕನ್ನಡದ ಅನುವಾದವಾಗಿವೆ. ಇದಲ್ಲಿದೆ ಭಕ್ತಿಕರೀತ ಜಾ (ಮ) = ಭಕ್ತಿ ಮಾಡುತ್ತಲಿರು (ಕ) ಸಾಂಗತ ಚೈಸ (ಮ) = ಹೇಳುತ್ತ ಕೂಡು (ಕ) ತೊ ಅಸೆಚ ಸಾಂಗತ ಆ ಲಾ ಆ ಹೆ (ಮ) = ಆತನು ಇದೇ ರೀತಿ ಹೇಳುತ್ತ ಬಂದಿದ್ದಾನೆ (ಕ.) ಇಂತಹ ಅನೇಕ ಉದಾಹರಣೆ ಕನ್ನಡ ಶೈಲಿಯಿಂದ ಎರವಲವಾಗಿ ಬಂದಿವೆ, ಸಂಖ್ಯೆಗಳನ್ನು ಏಣಿಸುವ ರೀತಿಯನ್ನು ಕುರಿತು ವೀಸ-ದ್ವಿದಶ (ಮ)— ಇಪ್ಪತ್ತು (ಕ), ತೀಸ–ತ್ರಿದಶ (ಮ) ಮೂವತ್ತು (ಕ) ಇತ್ಯಾದಿ. ಕನ್ನಡದಲ್ಲಿ ಹತ್ತರ ಎರಡು ಮೂರು ಪಟ್ಟು ಮಾಡುವ ಪರಿಪಾಠವಿದೆ. ಮಹಾರಾಷ್ಟ್ರದ ಕುಣಬೀ ಜಾತಿಯವರು ಸತ್ತರ (ಎಪ್ಪತ್ತು) ಅನ್ನದೆ ತೀನವಿಸಾ (ಮೂರಿಪ್ಪತ್ತು) ಅನದಹಾ (ಮೇಲೆ ಇಲ್ಲವೆ ಮತ್ತು ಹತ್ತು) ಎನ್ನುವದು ಕನ್ನಡದ ಮೂರಿಪ್ಪರದುಹತ್ತು ಈ ವಾಕ್ಯದ ಶಬ್ದಶಃ ಅನುವಾದವಾಗಿದೆ.

ಪುರಾತನ ಮರಾಠಿಯಲ್ಲಿ ಅಂತ್ಯಸ್ವರ "ಉ" ಎಂದು ರೂಪಾಂತರ ಪಡೆಯುವ ಪರಿಪಾಠವಿತ್ತು. ಕೆಲವರ ಅಭಿಪ್ರಾಯದಂತೆ, ಈ ಪ್ರಕಾರದ ಶಬ್ದಗಳಲ್ಲಿ ವಿಸರ್ಗ ಉಂಟಾಗಿ, ಬಳಿಕ 'ಓ' ರೂಪ, ತದನಂತರ 'ಉ' ಪರಿವರ್ತನೆ. ಇಲ್ಲವೆ ಕವಿತೆಯಲ್ಲಿ ಯಮಕ ಸಾಧಿಸಿಕೊಳ್ಳಲು ಈ 'ಉ' ಕಾರಾಂತ ಬಳಕೆಯಲ್ಲಿದ್ದಿತು. ಆದರೆ ಹಳೆ ಮರಾಠಿ ಗದ್ಯ **ಪಂಚತಂತ್ರ** ಉದಾಹರಣೆ ಗಮನಿಸಿದಲ್ಲಿ ಮೇಲೆ ಉಲ್ಲೇಖಿಸಿದ ಕಾರಣಗಳು ಸರಿಹೊಂದುವದಿಲ್ಲ. "ಕವ್ಹಣೀ ಏಕೆ ನಗರೀ ದೇವಶರ್ಮಾ ವ್ಹಣಿಜೆ ಬ್ರಾಹಣೆ ತಯಾಚಿಯೆ ಭಾರ್ಯೆಸಿ ಪ್ರಸೂತಿ ಜಾಲೀ. ಏಕು ಪುತ್ರು, ಏಕು ಮುಂಗೂಸ, ಪುಣು ತಯಾಸಿ ವಿಶ್ವಾಸ ತೀನಾ-ಥೋರು ವಿಲಾಪೂ ಕರೂ ಆದರಿಲಾ" ("ಮ"). ಒಂದಾನೊಂದು ಪಟ್ಟಣದಲ್ಲಿ ದೇವಶರ್ಮಾನೆಂಬ ಬ್ರಾಹ್ಮಣನ ಹೆಂಡತಿಯು ಪ್ರಸೂತಿಯಾಯಿತು. ಒಂದು ಗಂಡು ಮಗು, ಒಂದು ಮುಂಗಲಿ. ಆದರೆ ಆತನಿಗೆ ವಿಶ್ವಾಸವಾಗಲಿಲ್ಲ, ಹಿರಿಯರು ರೋದಿಸ ತೊಡಗಿದರು" (ಕ) ಇಲ್ಲಿ 'ಉ' ಕಾರಾಂತ ಅನಿಶ್ಚಿತ ರೀತಿಯಲ್ಲಿ ಬಳಸಿದ್ದು ಕಾಣುವದು ಮಾತ್ರವಲ್ಲ ಇತ್ತೀಚೆಯ ಮರಾಠಿಯಲ್ಲಿ

ಪ್ರಚಾರವೂ ಇರುವದಿಲ್ಲ. ಹೀಗಾಗಿ ಈ ವಾಕ್ಯ ರಚನೆಯಲ್ಲಿ ಬಳಸಲಾದ ಶೈಲಿ ಮೂಲ ಕನ್ನಡದೆಂಬ ಅನುಮಾನವು ಬರುವದು.

ಚಂಪೂ ಕಾವ್ಯ ಪ್ರಕಾರದ ಜನುಮ ಪ್ರಚೀನ ಕನ್ನಡದಲ್ಲಿ ಉಂಟಾಯಿತು; ಬಳಿಕ ಸಂಸ್ಕೃತದಲ್ಲಿ "ಶೃಂಗಾರ ಲೀಲಾವತಿ" ಕಾವ್ಯ ರಚೈತರು ಜೈನ ದಿಗಂಬರ ಪಂಥಿಗಳು. ಮರಾಠಿ ಕವಿ ರಘುನಾಥ ಪಂಡಿತ 'ನಲದಮಯಂತಿ ಸ್ವಯಂವರ' ಎಂಬ ಶುದ್ಧ ಶೃಂಗಾರಿಕೆಯನ್ನು ಆ ಬಳಿಕ ಸುಮಾರು ಐದುನೂರು ವರುಷಗಳ ನಂತರ(ಕಾಲಮಾನ ನಿಶ್ಚಿತವಿಲ್ಲ) ರಚಿಸಿದನು ಇದು ಮರಾಠಿಯ ಮೊದಲಿನ ಶೃಂಗಾರ ಕಾವ್ಯವಾಗಿದೆ. ಈ ಕವಿ ತಂಜಾವರದ ನಿವಾಸಿ ಎಂಬ ವದಂತಿ ಉಂಟು. ಅನುಪ್ರಾಸದಂತಹ ಶಬ್ದಾಲಂಕಾರ ಹುಟ್ಟಿ ಬೆಳೆದದ್ದು ಕರ್ನಾಟಕದ ಮಣ್ಣಿನಲ್ಲಿ. ಮರಾಠಿ ಪಂಡಿತರಾದ ಮೋರೋ ಪಂತ ಮತ್ತು ರಘುನಾಥ ಪಂಡಿತರ ಮೇಲೆ ಇದರ ಪ್ರಭಾವ ಅಚ್ಚಳಿಯದೆ ಮೂಡಿದುದು ಅವರ ಕೃತಿಗಳಲ್ಲಿ ಕಾಣುವದು. ಮಧ್ಯಯುಗದ ಸಂಸ್ಕೃತ ಕಾವ್ಯ ರಚನೆಗಳಲ್ಲಿ ಇದನ್ನು ಬಳಸಲಾಯಿತು. ಯಕ್ಷಗಾನದಂತಹ ಜಾನಪದ ಕಲೆ ಅಣ್ಣಾಸಾಹೇಬ ಕಿರ್ಲೋಸ್ಕರರ ಮೇಲೆ ಪ್ರಭಾವನ್ನುಂಟುಮಾಡಿದ್ದು, ಅವರ "ಸಂಗೀತ ಸೌಭದ್ರ" ನಾಟಕದಲ್ಲಿ ಬಳಸಿದ ಘಟೋತ್ಕಚನ ಪಾತ್ರವೇ ಸಾಕ್ಷಿಯಾಗಿದೆ. ಇದನ್ನು ಮರಾಠಿ ನಾಟ್ಯ ಮೀಮಾಂಸಕರು ಮಾನ್ಯ ಮಾಡಿದ್ದಾರೆ. ಕೀರ್ತನ ಪರಂಪರೆ ಮೂಲ ಮರಾಠಿ ಕೊಡುಗೆ ಎಂದು ಎದೆ ತಟ್ಟಿ ಹೇಳುವ ವಿಚಾರವಂತರಿಗೆ ಆಂಪಲವಾಸಿವೆಂಬ ಬ್ರಾಹ್ಮಣ ಶಾಖೆ ಮಲಬಾರದಲ್ಲಿದೆ. ಇವರೇ ಕೀರ್ತನ ಪರಂಪರೆಯ ಜನಕರು ಎಂಬ ಉಲ್ಲೇಖ ಸೆನ್ಸ್ ವರದಿಯಲ್ಲಿ ಉಲ್ಲೇಖಿಸಲಾಗಿದೆ. ವೈಷ್ಣವ–ಶೈವ ಪಂಥದ ಉದಯ ದ್ರವಿಡ ದೇಶದಲ್ಲಿ (ದಕ್ಷಿಣ ದೇಶದಲ್ಲಿ) ಉಂಟಾಯಿತು. ಚಿಕ್ಕ ಪದ್ಯ ರಚನೆ ಮತ್ತು ಲಲಿತ ವಾಙ್ಮಯ ದಕ್ಷಿಣದಲ್ಲಿ ಫಲಿಸಿತು. ಕೀರ್ತನ ಪ್ರಚಾರ ಮಹಾರಾಷ್ಟ್ರಕ್ಕೆ ವಲಸೆ ಬಂದಿತು. ಪುರಂಧರ ವಿಠ್ಠಲರ ಕೃಷ್ಣಲೀಲೆಯಲ್ಲಿ ಅಡಗಿದ ರಸ, ಮರಾಠಿ 'ಬಿಲ್ಹಲ ಚರಿತ್ರೆ' ರಚಿಸಿದ ಬೀಡಕರ ವಿಠ್ಠಲರಿಗೆ ಅವಗತವಾದಂತೆ ತೋರದು.

ಶಬ್ದಕೋಶ, ವ್ಯಾಕರಣ, ವಾಕ್ಯರಚನೆ, ಶೈಲಿ ಮತ್ತು ವಾಙ್ಮಯ ವೃದ್ಧಿ ಕುರಿತು ಮರಾಠಿ–ಕನ್ನಡ ಭಾಷೆಗಳ ಪಕ್ಕಿನೋಟ ವಿವರಿಸಲು ಪ್ರಯತ್ನಿಸಲಾಗಿದೆ. ಕನ್ನಡ ವಾಙ್ಮಯದ ಮೇಲೆ ಮರಾಠಿಯ ಪ್ರಭಾವ ಕುರಿತು ಚರ್ಚಿಸಿದರೆ ಚಂದ್ರನ ಸಂಪೂರ್ಣ ದರುಶನ-ಹುಣ್ಣಿಮೆಯಿಂದ ಅಮಾವಾಸ್ಯೆ; ಅಮಾವಾಸ್ಯೆಯಿಂದ ಹುಣ್ಣಿಮೆ ವರೆಗೆ-ಆದಂತೆ ಆಗುವದು.

ಮಹಾರಾಷ್ಟ್ರದ ಸಂತ ಏಕನಾಥರು "ನಮೋ ಕಾನಡೀ ಭಾಷಾ" ಎಂದು ಬಣ್ಣಿಸಿದ್ದಾರೆ. ದಿ. ವಾಮನ ದಾಜಿ ಓಕ ತಮ್ಮ "ಕಾವ್ಯ ಸಂಗ್ರಹ" ಗ್ರಂಥದಲ್ಲಿ ಜ್ಞಾನೇಶ್ವ

ರರ "ಕಾಂಟ್ಯಾಚ್ಯಾ ಅಣೆವರ ವಸತಿ ತೀನ ಗಾಂವ......" ಭಾರೂಡದ (ಮುಂಡಿಗೆ) ಉಲ್ಲೇಖ ಕೈಕೊಂಡಿದ್ದಾರೆ, ಪುರಂದರ ದಾಸರ "ಮುಳ್ಳು ಕೊನೆಯ ಮೇಲೆ ಮೂರು ಕೆರೆಯ ಕಟ್ಟಿ...... ಈ ಮುಂಡಿಗೆ ಜ್ಞಾನೇಶ್ವರರ ಭಾರೂಡದ ಅನುವಾದವಾಗಿದೆ. ಕನ್ನಡ-ಮರಾಠಿ ಸಂಶೋಧಕರು ಈ ಮೇಲೆ ಉಲ್ಲೇಖಿಸಿದ ಕೃತಿಗಳ ರಚನಾಕಾರರು ಬೇರೊಬ್ಬರು ರಚಿಸಿರುವರು ಎಂದು ಸಾಧಾರ ಎತ್ತಿ ತೋರಿಸಿದ್ದಾರೆ.

ಕನ್ನಡ-ಮರಾಠಿ ಕವಿ ಚಂದ್ರಾತ್ಮಜ ರುದ್ರ [೧೭೧೯-೧೭೯೯] ಕುಮಾರವ್ಯಾಸನ "ಕರ್ನಾಟಕ ಕಥಾ ಮಂಜರಿ'ಯನ್ನು ಆಧಾರವಾಗಿ ಬಳಸಿ ಮಹಾಭಾರತವನ್ನು ರಚಿಸಿದ್ದಾನೆ. ಪ್ರಸ್ತುತ ಲೇಖಕನ ಬಳಿ ಚಂದ್ರಾತಜ ರುದ್ರ ರೂಪಾಂತರಿಸಿದ 'ಉದ್ಯೋಗಪರ್ವ'ದ ಹಸ್ತ ಪ್ರತಿ ಇದೆ, ಅನುಪಲಬ್ಧವಾದ 'ಭೀಷ್ಮಪರ್ವ'ದ ೫೫ ನೆಯ ಪದ್ಯದಲ್ಲಿ - ''ಮಜ ಸಂಸ್ಕೃತಿ ನಾಹೀ ಅಭ್ಯಾಸ
ಕರ್ನಾಟಕ ಕವಿ ಕುಮಾರ ವ್ಯಾಸ
ತ್ಯಾಚೇನಿ ಆಧಾರ ಗ್ರಂಥ ವಿಲಾಸ
ಪ್ರಾರಂಭಿಲಾ ಹಾ ಹೇತಂ''

[ನನಗೆ ಸಂಸ್ಕೃತದ ಅಭ್ಯಾಸವಿಲ್ಲ. ಕರ್ನಾಟ ಕವಿ ಕುಮಾರವ್ಯಾಸನನ್ನೇ ಅಧರಿಸಿ ನಾನು ನನ್ನ ಕಾವ್ಯ ರಚಿಸುತ್ತೇನೆ] ಎಂದು ಹೇಳಿರುವನು.

ಆಧುನಿಕ ಮರಾಠಿ ಸಾಹಿತ್ಯದ ಮೊದಲಿನ ವಿಡಂಬನಕಾರರು ಮಂಗೇಶ ರಾಮಚಂದ್ರ ತೆಲಂಗ [೧೮೫೯-೧೮೮೯] ಇವರು ಕಾರವಾರದ ಬಾಡದವರು. ಅಲ್ಲದೆ ಮರಾಠಿ ಯಲ್ಲಿ 'ಸಂಗೀತ ಹಜಾಮತ' ರೂಪಕದ ರಚನಾಕಾರರು.

"ಮರಾಠಿ ಭಾಷೆ ಹುಟ್ಟುವ ಪೂರ್ವ ಕನ್ನಡವೇ ಮಹಾರಾಷ್ಟ್ರದ ಭಾಷೆಯಾಗಿತ್ತು, ಮರಾಠಿ ಕನ್ನಡದ ನೆಲದಲ್ಲಿ ಬೆಳೆದಿದೆ" ಎಂಬರ್ಥದ ಮಾತು ಲೋಕಮಾನ್ಯ ತಿಲಕರ ದಾಗಿದೆ.

ಕನ್ನಡ ಕವಿ ಪಂಪನು [ಕ್ರಿ.ಶ. ೯೪೧] ಅರ್ಜುನನನ್ನು ಸ್ತುತಿಸುವ ಸನ್ನಿವೇಶದಲ್ಲಿ ದ್ರೋಣಾಚಾರ್ಯರ ಮುಖಾಂತರ' ಆರೇ ಹೊಯ್ ಜಾ ಬಾಪೂ [೨-೬೦]' ಎಂಬ ಮರಾಠಿ ವಾಕ್ಯ, ಜನ್ನನು ತನ್ನ 'ಅನಂಥನಾಥ ಪುರಾಣ [೧೨೦೯]' ದಲ್ಲಿ 'ಉಠೀ ಉಠೇ ವಣಾಗಾಬೈಸ' ಎಂಬ ವಾಕ್ಯಗಳ ಪ್ರಯೋಗ ಆಂಡಯ್ಯ 'ಕಬ್ಬಿಗರ ಕಾವ್ಯ' ದಲ್ಲಿ' ಝುಾರೇ ಜ ಝುಾರೇ ಹಾ ತೊರೇ ಹೋ ಹೋ ಮಾರ್ಝಾಲಾ' ಎಂಬ ಮರಾಠಿ ವಾಕ್ಯ ಬಳಸಿದ್ದಾರೆ. ಕುಮಾರ ವ್ಯಾಸನ 'ಕರ್ನಾಟಕ ಕಥಾ ಮಂಜರಿ'ಯಲ್ಲಿ ಆದರಣೆ, ಬಡಾವಣೆ, ಜಾಣಪಣ, ವಿಸ್ತಾರಪಣ, ಶೌರ್ಯಪಣ, ಇತ್ಯಾದಿ ಮರಾಠಿ ಪ್ರತ್ಯ ಯಾಂತ ಭಾವನಾಮ ಸೂಚಕ ಪದಗಳಿವೆ. ಅಲ್ಲದೆ ಪತಿಕರಿಸು [ಪತಿಕರಣೆ],

ನಿವದಿಸು (ನಿವಡಣೆ], ಖೇಪೆ [ಸಲ], ಖೇಳೀಮೇಳಿಸೆ ಮೊದಲಾದ ಮರಾಠಿ ವಾಕ್ಯಗಳು ಕಂಡು ಬರುತ್ತವೆ. ಏಕನಾಥರ ಮೊಮ್ಮಗ ಮುಕ್ತೇಶ್ವ ಚಿಂತಾಮಣಿ ಮುದಗಲ್ಲ [೧೫೩೧]. ಈತ ತನ್ನ ಮರಾಠಿ ಮಹಾಭಾರತದಲ್ಲಿ ಕುಮಾರ ವ್ಯಾಸನ 'ಅರಸುಗಳಿಗಿದು—' ಪದವನ್ನಂತೂ ನೇರವಾಗಿ ಮರಾಠಿಗೆ ಅನುವಾದಿಸಿದ್ದಾನೆ. ಶ್ರೀದತ್ತ ಸಂಪ್ರದಾಯದ 'ಗುರುಚರಿತ್ರೆ' ಒಂದು ಅಧ್ಯಾಯ ಕನ್ನಡದ್ದಾಗಿವೆ.

ಐಹೊಳೆ ಶಾಸನ; ಪರಮೇಶ್ವರ ಪುಲಕೇಶಿ (ಕ್ರಿ. ಶ.೬೩೪) ಕಾಲದ್ದು; ಇಲ್ಲಿ "ಅನ ಮುದಧಿ ಪತಿತ್ವಂ ಯೋ ಮಹಾರಾಷ್ಟ್ರ ಕಾಣಾಂ॥ ನವ ನವತಿ ಸಹಸ್ರಗ್ರಾಮ ಭಾಜಂ ತ್ರಯಾಣಾಂ" ಎಂದಿದ್ದು ಮೊದಲ ಬಾರಿ "ಮಹಾರಾಷ್ಟ್ರ" ವಾಕ್ಯ ಪ್ರಯೋಗವಾಗಿದೆ ಎಂಬುದು ಕೆಲವರ ಅಭಿಪ್ರಾಯ.

"ಕಲೆ ಎನ್ನುವಾಗ ಭಾವಗಳೊಂದಿಗೆ ಪ್ರಜ್ಞೆಯೂ ಕೆಲಸ ಮಾಡುತ್ತದೆ. ವ್ಯಷ್ಟಿ ಪ್ರಜ್ಞೆ ಎಂಬುದು ಹೆಚ್ಚಾಗಿ ಒಬ್ಬ ವ್ಯಕ್ತಿಯ ಪರಿಧಿಗೆ ಸೇರುತ್ತದೆ. ಸಮಷ್ಟಿ ಪ್ರಜ್ಞೆ ಒಂದು ಸಮಾಜದ ಪರಿಧಿಗೆ ಸೇರುತ್ತದೆ. ಸಮಷ್ಟಿ ಸಾಹಿತ್ಯದಲ್ಲಿ ಒಂದು ಸಮಾಜದ ಸಾಮೂಹಿಕ ಅಭಿವ್ಯಕ್ತಿಗೆ ಹೆಚ್ಚಿನ ಪ್ರಾಧಾನ್ಯತೆ ಸಿಗುತ್ತದೆ" ಎಂಬ ವಿಚಾರಗಳು ಡಾ॥ ವಿಲ್ಯಂ ಮಾಡ್ತರದಾಗಿದೆ. ನನ್ನ ಈ ಲೇಖಕ್ಕೆ ಕನ್ನಡ-ಮರಾಠಿ ಭಾಷೆಯ ಸಮಷ್ಟಿ ಸಾಹಿತ್ಯ ವಿಚಾರಗಳನ್ನು ಹಿನ್ನೆಲೆಯಾಗಿ ಬಳಸಲು ಪ್ರಯತ್ನಿಸಿರುವೆ. ಇದೊಂದು ಚರ್ಚೆಗೆ ಅನುಮಾಡಿಕೊಡುವ ವಿಷಯ. ವಾದ, ಪ್ರತಿವಾದ, ಇತ್ಯಾದಿಗಳನ್ನು ನಾನು ವಾಚಕರಿಂದ ಅಪೇಕ್ಷಿಸುವೆ.

## ಗ್ರಂಥ ಋಣ

**ಮರಾಠಿ**


೧ ಜ್ಞಾನ ಕೋಶ

೨ ಸಂಸ್ಕೃತಿ ಕೋಶ

೩ 'ಕೇಸರಿ' ಪತ್ರಿಕೆ ೧೯೭೩ ನವ್ಹೆಂಬರ-ಡಿಶೆಂಬರ. ಶಿಂಧೆ ಅವರ ಲೇಖ

೪ ಸಮೀಕರಣ ಸಂಗ್ರಹ ಲೇ. ಚನ್ನಬಸಪ್ಪಾ ಧಾರವಾಡಕರ ೧೮೫೭

೫ ವಿವಿಧ ಜ್ಞಾನ ವಿಸ್ತಾರ– ೧೮೮೭–೬೮ ಶೇ. ರಾ, ಚುರಮುರಿ ಅವರ ಲೇಖಗಳು

೭ ಮಹಾರಾಟಿ ಸಂಸ್ಕೃತಿ ಕಾಹಿ ಸಮಸ್ಯಾ- ಶಂ. ಬಾ. ಜೋಶಿ.

**ಕನ್ನಡ**

೭ ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ-ಖಂಡ-೬

[ಅ] ಈ ಕಾಲದ ಭಾಷೆಯ ಸ್ವರೂಪ : ಡಾ ॥ ಕೃಷ್ಣ ಪರಮೇಶ್ವರ ಭಟ್ಟ

[ಬ] ಡೆಪ್ಯೂಟಿ ಚೆನ್ನಬಸಪ್ಪ ಮತ್ತು ವೆಂಟ ರಂಗೋಕಟ್ಟಿ :
ವೆಂಕಟೇಶ ಸಾಂಗಲಿ

೮ ಸಂಕ್ರಮಣ ಸಾಹಿತ್ಯ : ಸಂಪುಟ ೧; ಸಂ. ಚಂದ್ರಶೇಖರ ಪಾಟೀಲ

೯ ವಿಭಾವ : ಸಂಪಾದಕ ಡಾ ॥ ಬಸವರಾಜ ಮಲಶೆಟ್ಟಿ,
'ಜನಪದ ಭಾಷೆ' : ಡಾ ॥ ವಿಲ್ಯಂವರಾಡ್ತ

೧೦ ಬೆಳುವಲ–ಡಾ॥ ಬೆಟಗೇರಿ ಕೃಷ್ಣಶರ್ಮ ಅಭಿನಂದನ ಗ್ರಂಥ ಸಂ. ಜ್ಯೋತಿ ಹೊಸೂರ, ಡಾ॥ ಬಸವರಾಜ ಮಲಶೆಟ್ಟಿ ಮತ್ತು ನಿಂಗಣ್ಣ ಸಣ್ಣಕ್ಕಿ; ಕನ್ನಡ-ಮರಾಠಿ ಸಾಹಿತ್ಯ ಬಾಂಧವ-ಲೇಖಕ ಎಸ್. ಸಿ. ಪಾಟೀಲ.

೧೧ ಕರ್ನಾಟಕ–ಮಹಾರಾಷ್ಟ್ರ– ನಾಲ್ಕನೆಯ ಜಿಲ್ಲಾ ಸಾಹಿತ್ಯ ಸಮ್ಮೇಲನ ಮುಂಬಯಿ ಅಧ್ಯಕ್ಷ ಡಾ॥ಆರ್. ಸಿ. ಹಿರೇಮಠರ ಭಾಷಣ.

೧೨ ಕನ್ನಡ ಸಾಹಿತ್ಯ ಚರಿತ್ರೆ : ಡಾ॥ ರಂ. ಶ್ರೀ. ಮುಗಳಿ

೧೩ ಮರಾಠಿಯಲ್ಲಿ ಕುಮಾರವ್ಯಾಸ: ಡಾ. ಪ್ರಲ್ಹಾದ ಮುದಗಲ್ಲ,
ಕಸ್ತೂರಿ–ನವ್ಹಂಬರ ೧೯೮೩

೧೪ ನಾಟ್ಯಾಚಾರ್ಯ ಚುರಮುರಿ; ಡಾ॥ ಪ್ರಲ್ಹಾದ ಮುದಗಲ್ಲ;
ಕಸ್ತೂರಿ- ಅಗಷ್ಟ ೧೯೮೨

೧೫ ಸಂಗೀತ ಹಜಾಮತ: ಡಾ॥ ಪ್ರಲ್ಹಾದ ಮುದಗಲ್ಲ;
ಸಂಕ್ರಮಣ

೧೬ ಜ್ಞಾನೇಶ್ವರ–ಪುರಂದರದಾಸ: ಏಕನಾಥ: ಲೇ–ಡಾ॥ ಪ್ರಲ್ಹಾದ
ಮುದಗಲ್ಲ: ಕಸ್ತೂರಿ-ಮೇ ೧೯೮೭

## ಜಿ. ಪರಮೇಶ್ವರ ಕತ್ತಿಗೆ

# ಹೊತ್ತು ಕಳೆದಿದೆ

ನಡೆದೇ ಇರುವನು ಹೀಗೆ.
ಹಿಂದೆ ನೋಡದೆ ಹೋದರೆ ಹೇಗೆ ?
ಬಿದ್ದ ಗುಂಡಿಯು ಆಳ
ಆಳತೆಯಾದರೂ ಬೇಡವೇ ಕೇಳಿದವರಿಗೆ ಹೇಳಲು ?

ಶಾಲೆಯೊಳಗೆ ತಿದ್ದಿ ಓದಿದ ತ್ರಿವೇದು
ವಾಜ್ಯವನೆ ಉರು ಹೊಡೆದು
ಹರಿದ ಅಂಗಿಗಳ
ಜರಿದ ಹೊಟ್ಟೆಯೊಳಗಿನ
ಕೈ ಬಾಯಿಗಳ ಗೂಡಿಸಿ ಹಳಿಯುತ ಬಿಡದೆ
ನಡೆದೇ ಇರುವನು !
ನೆರಳೀಯದ ಕೊಡೆ
ಹಿಡಿದು ದಾರಿಯುದ್ದಕೂ
ಮರಗಳ ಶೊಪ್ಪಲ ಹರಿದು.

ನಿಲ್ಲಲಾರ, ಕುಂತು ಕೇಳಲಾರ.
ಓಡುವ ರೈಲು
ಹಳಿ ತಪ್ಪುವ ಹಾಗೆ ಹೊರಟಿರುವ,
ಸಿಕ್ಕೀತೆನುತ ತೊಟ್ಟಿಕ್ಕುವ ಉಪ್ಪು ನೀರ ಹುಡುಕಿ.

ಬಸ್ಸಿಳಿದ ಜನ
ಕೂಗಿದರೂ ತಿರುಗಲೊಲ್ಲ,
ಕಿವುಡನಲ್ಲ ಇವನೇನೂ
ಕುರುಡನಲ್ಲ ಗಾಂಧಿವಿ.

ಹಾಯುತಿರುವ ಕೂಳೀಕಲ್ಲ
ಮೇಲೆ ಬೀಳುವುದು ಪಾಠ-
ವಾಗಿಸಿಕೊಂಡವನಿವನು.
ಹೊತ್ತಿಗೆಯು ಪುಸ್ತಕ ಹಿಡಿದು
ಬದುಕಿ ಹುಡುಕುತ್ತಾ
ನಡದೇ ಇರುವನು ಹೀಗೆ.
ಹಿಂದೆ ನೋಡದೇ ಹೋದರೆ ಹೇಗೆ.

## ನೋವಿನ ಎಳೆಗಳು: ರಾಜೇಂದ್ರ ಅಣ್ಣಾನವರ

(ದಾಂಗುಡಿ ಪ್ರಕಾಶನ, ಜ..ನಿಪೇಟೆ ರಾಮದುರ್ಗ; ೧೯೮೦)

'ನೋವಿನ ಎಳೆಗಳು' ಎಂಬ ಸಂಕಲನದಲ್ಲಿ ರಾಜೇಂದ್ರ ಅಣ್ಣಾವರ ಮುವತ್ನಾಲ್ಕು ಕವನಗಳನ್ನು ಕೊಟ್ಟಿದ್ದಾರೆ. ಹೆಚ್ಚುಮಟ್ಟಿನ ಕವನಗಳು ಚಿಕ್ಕದಾಗಿವೆ. ಇದರಿಂದ ಕಾವ್ಯಗುಣಕ್ಕೆ ಹೆಚ್ಚು ಲಾಭವಾಗಿದೆ. ಇಂಥ ಸಂದರ್ಭದಲ್ಲಿ ಕವಿ ವಸ್ತುವಿಗೆ ರೂಪಕ, ಪ್ರತಿಮೆ ಒದಗಿಸಲು ಪ್ರಯುತ್ನಿಸಿದ್ದಾರೆ. ಆದ್ದರಿಂದ ವಾಚಾಳಿತನಕ್ಕೆ ಕಡಿವಾಣ ಬಿದ್ದು ಹೆಚ್ಚು ಸಮತೂಕವನ್ನು ಪಡೆಯುವ ಅವಕಾಶವಿರುತ್ತದೆ. ಇಂಥ ಕೆಲ ಕವಿತೆಯಾದರೂ ಸಂಕಲನದಲ್ಲಿರುವುದು ಇಲ್ಲಿಯ ಹೆಚ್ಚುಗಾರಿಕೆ.

ಇಂದಿನ ಕವಿ ತನ್ನ ಸುತ್ತಲಿನ ವಾಸ್ತವಿಕತೆಗೆ ಕಣ್ಣು ಮುಚ್ಚಲಾರ, ಆದರೆ ಕವಿತೆಗೆ ವಾಸ್ತವತೆ ಒಂದೇ ಸಾಲದು, ಅದನ್ನು ಸಶಕ್ತವಾಗಿ ಅಭಿವ್ಯಕ್ತ ಪಡಿಸುವುದೇ ಕಾವ್ಯದ ಹೆಗ್ಗಳಿಕೆಗೆ ಕಾರಣವಾಗುತ್ತದೆ. ಅಂಥ ದಾರಿಯಲ್ಲಿ ಅಣ್ಣಾವರ ಇರುವುದ ರಿಂದ ಅವರ ಕವಿತೆ ನಮಗೆ ಹೃದ್ಯವಾಗುತ್ತದೆ.

ಕವಿತೆಗಳಲ್ಲಿ ಹೆಚ್ಚಿನ ಪಾಲು 'ನೋವಿನ ಎಳೆ'ಗಳೇ ಆಗಿವೆ ಕೆಲ ಕವಿತೆಗಳಲ್ಲಿ ಜೀವನದ ಬಗ್ಗೆ ಉಲ್ಲಾಸವನ್ನು ಮತ್ತು ವ್ರತಸ್ಥ ಗೌರವವನ್ನು ತೋರಲಾಗಿದೆ.

ಮೊದಲನೆಯದಕ್ಕೆ 'ನೋವಿನೆಳೆಗಳು, ನಿಂತು ಸಾಗೈತೊ ಇವರ ತಲಿಮಾರು, ಹೊಟ್ಟೆಬಾಕ; ಪರದಾಟ, ಕಂಡದಾರಿ, ಎಂಬತ್ತೊಂದೆ, ಮುಂತಾದವು ಉದಾಹರಣೆ ಯಾದರೆ, ಎರಡನೆಯದಕ್ಕೆ, 'ಬರುವ ಬೆಳೆ' ಬದಕು, ಬಯಕೆ, ಬೇಂದ್ರೆ, ಬದಕು ದೊಡ್ಡದು, ಬಂಟಬೇಕು ಮುಂತಾದವು ಉದಾಹರಣೆಯಾಗಿದೆ.

ಕವಿತೆಗಳು ಸರಳ ರಚನೆ ಎಂದು ಕಂಡರೂ ತುಂಬಿಕೊಂಡ ಚಿಂತನೆಯಿಂದಾಗಿ ಬೇಕೆನ್ನಿ ಸುತ್ತದೆ. ರಚನೆ ಸರಳ ಇರುವುದು ಅಪರಾಧವಲ್ಲ. ನೋವಿನ ಎಳೆಗಳು ಅಂಥ ಒಂದು ಕವಿತೆ. 'ಬರುವ ಬೆಳೆ' ತನ್ನನ್ನು ತಾನು ಶೋಧಿಸಿಕೊಳ್ಳುತ್ತ ಬೆಳೆಯಬೇಕಾದವರ ಚಿತ್ರ ಸ್ಪುಟವಾಗಿ ಮೂಡಿ ಬಂದಿದೆ; ಎಂಬಂತೊತ್ತೆ ಒಂದು ಕಟುವಿಡಂಬನೆಯಾದರೆ, 'ಬಂಟಬೇಕು' ಒಂದು ಅರ್ಥಪೂರ್ಣ ಚಿತ್ರಣವಾಗಿದೆ, ಭಾರತವೆಂಬ ಮುದುಕಿಯ ಚಿತ್ರ "ತುಂಡು ತುಂಡು ಹರಿದ ಬಟ್ಟೆ ಎಳೆದು ತಂದು ನಿತ್ಯ ಹೊಲಿವ ದಿಟ್ಟತನದ ಗಟ್ಟಿ ಮುದಕಿ" ಎಂಬ ಸಾಲುಗಳಲ್ಲಿ ಸೊಗಸಾಗಿ ಮೂಡಿ ಬಂದಿದೆ. ಬೇಂದ್ರೆಯವರ

ಪ್ರಸಿದ್ಧ ಕವಿತೆಯು "ಸಾಲಾದ ರಾಜಮುಖಿ ನಿನ್ನಲ್ಲಿ ರಾಜಕಳೆ ಇಹುದು" ಎಂಬುದನ್ನು ನೆನಪಿಸಿಕೊಂಡರೆ ಮೇಲಿನ ಮುಂದುಕಿಯು ಚಿತ್ರಣದ ಅರ್ಥವಂತಿಕೆ. ಇನ್ನೂ ಹೆಚ್ಚುತ್ತದೆ.

ರಾಜೇಂದ್ರ ಅವರ ಕವನಗಳು ಇನ್ನೂ ಹೆಚ್ಚು ಆಶೆಯನ್ನು ಓದುಗನಲ್ಲಿ ಮೂಡಿಸಲು ಶಕ್ತವಾಗಿದೆ. ಯಾಕೆಂದರೆ ಅನೇಕ ಒಳ್ಳೆಯ ರಚನೆಯ ಪ್ರಯತ್ನಶೀಲತೆ ಇದೆ.

'ಕಂತೆ ಮೂಣಗಳಿಗೆ ನಮ್ಮ ಉತ್ತರ' ಕೂಡ ಒಂದು ಕಟಕಿಯಾಗಿ, ಈ ಸದ್ಯದ ಕಾವ್ಯೋದ್ದೇಶವನ್ನು ಸಾರುವಂತಿದೆ. 'ಪಂಜಾಬ'ದ ಪದ್ಯದ ಚಿತ್ರ ಕೂಡ ಮನಸೆರೆ ಹಿಡಿಯುತ್ತದೆ. 'ಬಡವರು' ಚಿಕ್ಕ ಕವಿತೆಯಾದರು ಹೆಚ್ಚು ಶಕ್ತಿಯುತವಾಗಿದೆ. 'ಖೋಮೇನಿಗಳಿಗೆ' ಕವಿತೆ ಪ್ರಪಂಚದಾದ್ಯಂತ ಇದ್ದ ಖೋಮೇನಿಗಳನ್ನು ತರಾಟೆಗೆ ತೆಗೆದುಕೊಳ್ಳುತ್ತದೆ.

ಇನ್ನು ಕೆಲವು ಹಾಯಿಕ-ಮತ್ತು ಹನಿಗವಿತೆಗಳು ಇವೆ. ಇವುಗಳಲ್ಲಿ ಕೆಲವು ಉತ್ತಮ ಹನಿಗಳಾಗಿವೆ.

"ನಲ್ಲಿಯಲ್ಲಿ
ನೀರು ಬಂದ ಮೇಲೆ
ಹಾಲಿನವನೂ ಬಂದ"

ಮಣ್ಣ ಮೇಲಿಟ್ಟ
ಮಗುವಿನ ಪುಟ್ಟ ಪುಟ್ಟ
ಹೆಜ್ಜೆಗಳು ಭೂಮಿ ತಾಯಿಗೆ ಕೊಟ್ಟ ಮುತ್ತುಗಳು

ಹೊಲಕೆ-ಮುತ್ತುವ
ಹಕ್ಕಿ ಹಿಂಡನ್ನು ಓಡಿಸಿ
ಹುಡುಗ
ತನ್ನ ಹಕ್ಕಿಗಾಗಿ
ಕತ್ತೆತ್ತಿ ಹುಡುಕುತ್ತಾನೆ.

ನಮ್ಮ ಜನಗಳ
ಬಿಕ್ಕಳಕೆ-ಮಾತುಗಳ ಕಮ್ದ
ರಿಪೇರಿ ಮಾಡಿ
ಮಾರಿಕೊಳ್ಳುತ್ತೇವೆ
ನಾವು ಬುದ್ಧಿವಂತರೆಂದು

ಮುಂತಾದ ಹನಿಗವನಗಳು ಚುರುಕಾಗಿವೆ.

ಸಂಗ್ರಹದಗುಂಟ ಕವಿ ತನ್ನದೇ ಆದ ಅಭಿವ್ಯಕ್ತಿ ಮಾರ್ಗವನ್ನು ಆರಿಸಿಕೊಳ್ಳು ತ್ತಿದ್ದಾರೆ. ಸಾಮಾಜಿಕ ಪ್ರಜ್ಞೆ, ವಾಸ್ತವದ ಕುರಿತು ವ್ಯಗ್ರತೆ, ಜಾಗತಿಕ ಸಂದರ್ಭದಲ್ಲಿ ಬಂಡವಾಳಶಾಹಿ ನವಿರಾಗಿ ಕುಣಿವ ಬಗ್ಗೆ ತಿಳಿವು ಇವೆಲ್ಲ ಕವಿತೆಗಳಲ್ಲಿ ವ್ಯೈವೆತ್ತಿವೆ. ಇವು ಬರಿದೆ ಹಾರಿಹೋಗದೆ ಓದುಗನನ್ನು ಕರೆದು ಚುಚ್ಚುತ್ತವೆ.

## ಮತ್ತೆ ಏಳಲು ಪೂರ್ವದಿಂದ:

## ಮಹಾಬಲಮೂರ್ತಿ ಕೊಡ್ಲಕೆರೆ

[ಅಭಿವ್ಯಕ್ತಿ ಪ್ರಕಾಶನ, ಮಂಗಳೂರು ೧೯೯೦]

ಮುಖ್ಯವಾಗಿ ಮಹಾಬಲಮೂರ್ತಿಯವರು ಜೀವನ ಪ್ರೀತಿಯ ಕವಿ. ಆದರೆ ಆ ಪ್ರೀತಿ ಕೇವಲ ಭಾವುಕ ಕನಸಾಗಿರದೆ ಜೀವನದ ಹಲವು ಹದಿನೆಂಟು ಕಷ್ಟಕೋಟಲೆಯ ಮಧ್ಯದಲ್ಲೇ ಹುದುಗಿರುವ ನಿಯಮ ಎಂಬಂಥ ತಾತ್ವಿಕತೆಯೆಡೆ ಚಾಚುವಂತಹದು. ಆದರೆ ಈ ಸಂಕಲನ ಎಲ್ಲ ಸಂಕೀರ್ಣತೆಯನ್ನು ಹೊಂದಿವೆ ಎಂದೇನೂ ಅಲ್ಲ. ಚಿಂತನೆಯನ್ನು ಕಾವ್ಯವಾಗಿಸುವಲ್ಲಿ ಭಾಷೆಯನ್ನು ದುಡಿಸಿಕೊಳ್ಳುವ ರೀತಿಯ ಬಗ್ಗೆ ಕವಿಗೆ ಎಚ್ಚರ ಇರುವುದು ಹೌದಾದರೂ ಆ ಭಾಷೆಗೆ ಒಂದಿಷ್ಟು ಉತ್ಸಾಹ, ಉದ್ದೀಪನ ಗುಣ ಬರಬೇಕಾದುದು ಅವಶ್ಯ.

ಸಂಕಲನದಲ್ಲಿ ಒಂದು ಪ್ರತಿಮೆಗುಂಟ ಬೆಳೆಯುವ, ಪ್ರತೀಕವಾಗಿ ವರ್ಣಿತವಾಗುವ ಮತ್ತು ಸಾಂದ್ರವಾಗಿ ವಸ್ತುಗಳನ್ನು ಪೇರಿಸುತ್ತ ಸಾಗುವ ಮೂರು ಪ್ರಕಾರದ ಕವನ ಗಳಿವೆ. ವಸ್ತು ಸಾಂದ್ರತೆಯುಳ್ಳ ಕವನಕ್ಕೆ ಉತ್ತಮ ಉದಾಹರಣೆಯಾಗಿ 'ಮತ್ತೆ ಏಳಲು ಪೂರ್ವದಿಂದ' ಆದರೆ ಪ್ರತೀಕಾತ್ಮತೆಗೆ 'ಸಂತಾನ' ಆಗಬಹುದು. 'ಗುಬ್ಬಿ' ಒಂದೇ ಪ್ರತಿಮೆಯ ಸುತ್ತ ಅರಳಿಕೊಂಡ ಉತ್ತಮ ಕವಿತೆ.

ಮುದುಕರು, ಚಿಂತೆ, ಗುಬ್ಬಿಯಲ್ಲೂ ಬ್ರಹ್ಮ, ಕೆಂಪು ಹೂವು, ಹಾವು, ಮತ್ತೆ ಏಳಲು ಪೂರ್ವದಿಂದ ಇವು ನಮ್ಮನ್ನಾಕರ್ಷಿಸುವ ಹೆಚ್ಚಿನ ಕವಿತೆಗಳು.

ಎಲ್ಲರೂ ಮುದುಕರಾಗುತ್ತಾರೆ, ಸಾಯುತ್ತಾರೆ. ಇದು ಸಹಜ; ಆದರೆ ಅಷ್ಟೆ ಸಹಜವಾದ ಉಳಿವೆಂದರೆ ಮನುಷ್ಯರ ಕ್ರಿಯಾಶೀಲತೆಯೇ ಆಗಿದೆ. ಅದು ಲೌಕಿಕಕ್ಕೆ ಸಂಬಂಧಿಸಿದ ಉತ್ಸಾಹಪೂರ್ಣ ಚಟುವಟಿಕೆ 'ಮುದುಕರು' ಕವಿತೆಯಲ್ಲಿ ಚಿತ್ರವನ್ನಿ ತ್ತಿದ್ದಾರೆ. "ಹಿಂದೆಲ್ಲ ಆತ ಹಚ್ಚಿದ ಗ್ಯಾಸ್ ದೀಪಗಳು...ಯಾಕೋ ಏನೋ ಅಪ್ಪ ಇದನ್ನೆಲ್ಲಾ ಪತ್ರದಲ್ಲಿ ಬರೆದಿರಲಿಲ್ಲ" ಎಂಬುದು ತುಂಬಾ ಪರಿಣಾಮಕಾರಿಯಾಗಿದೆ. ಮುಂದಿನ ಎರಡು ಸಾಲು ಅವಶ್ಯಕವೇ. ಎಂದು ಆಲೋಚಿಸಬೇಕು. ಗುಬ್ಬಿಯಲ್ಲಿಯೂ ಬ್ರಹ್ಮ ಚಿಕ್ಕ ಕವಿತೆಯಾದರೂ ಅದು ತರಂಗವೆಬ್ಬಿಸುವ ಭಾವ ವಿಸ್ತರವಾದುದು.

ಇಲ್ಲಿಯ ಸರಳ ನಿರೂಪಣೆ ಕೂಡ ಮೆಚ್ಚಿಗೆಗೆ ಪಾತ್ರವಾಗುತ್ತದೆ. ಹಾವು ಬೇರೆ ಬೇರೆ ಸ್ತರಗಳಲ್ಲಿ ಅರ್ಥವನ್ನು ಬಿಟ್ಟುಕೊಡುತ್ತ ಆದರೆ ಇಚ್ಛಿತ ಪರಿಣಾಮಕ್ಕೆ ಪೂರಕ ವಾಗಿ ನಿಲ್ಲುತ್ತದೆ. ಕೆಂಪುಹೂವು ಕೂಡ ಜೀವೋನ್ಮುಖತೆಗೆ ಸಾಕ್ಷಿಯಾಗಿದೆ. ಮತ್ತೆ ಏಳಲು ಪೂರ್ವದಿಂದ-ವಾಸ್ತವದ ವಿವಿಧ ವ್ಯಾಪಾರವನ್ನು ನಮ್ಮೆದುರು ತೆರೆದಿಡುತ್ತದೆ. ಜೀವನದ ಗಡಿಬಡಿ, ತವಕ, ಸಾವಧಾನತೆಯ ಕೊರತೆ, ಕೊಲೆ ಸುಲಿಗೆ, ಭಾವಶುಷ್ಕತೆಯನ್ನು ಹೇಳುತ್ತಲೇ

''ಈ ನಡುವೆ,
ಗದ್ದೆಯ ಬದುವಲ್ಲಿ ರೈತ ನರನರ
ಊಳಿ ನೇಗಿಲ ಗೀರು ಬೇರಿಗೆ ದಾರಿ ಮಾಡುತ್ತ
... ... ... ... ... ...
ಯಾಂತ್ರಿಕತೆ ಕಳಚಿ
ಮಣ್ಣಲ್ಲಿ ಕಣ್ಣಕೊಟ್ಟು ಪ್ರಕೃತಿ ದನಿಗೆ ಜೀವ ಕುಣಿತ''

ಎಂದು ಜೀವನದ ಅದಮ್ಯ ಆಶಾವಾದವನ್ನು ಕಾಣುತ್ತಾರೆ. ಮುಳುಗುವ ಸೂರ್ಯನಿಗೆ ಮತ್ತೆ ಮೂಡಲು ಇದೇ ಕಾರಣವಾಗುವುದು ಮನೋಹರವಾಗಿದೆ. ಸಂತಾನಂ ದಲ್ಲಿ ವಿವರಣೆ ಗದ್ಯನಡೆಯನ್ನು ಬಯಸುತ್ತದೆ. ಅಥವಾ ಇಂಥ ಕವಿತೆಗೆ ಇದೇ ಸಹಜವೇನೋ. ಆದರೂ ಸಂತಾನಂ ಒಬ್ಬ ಹುಡುಗನ ಕಥೆಯಾಗದೆ ಅಂಥವರ ಬದುಕಿಗೊಂದು ಪ್ರತೀಕವಾಗುವುದು ಪರಿಣಾಮಕಾರಿಯಾಗಿ ನೆರವೇರಿದೆ.

'ಜೀವ' ಸಂಕಲನದಲ್ಲಿ ತೋರಿದ ಚಿಂತನಾಪರತೆಯೇ 'ಮತ್ತೆ ಏಳಲು ಪೂರ್ವದಿಂದ'ದಲ್ಲೂ ಮುಂದುವರಿದಿದೆ. ಅದು ಇನ್ನೂ ಇಲ್ಲಿ ಗಟ್ಟಿಯಾಗಿದೆ. ಅದರೊಟ್ಟಿಗೆ ಕಾವ್ಯ ಸಾಮಾಜಿಕ ಆಯಾಮವನ್ನು ಪಡೆಯಲೆತ್ನಿಸುವ ಹೊಸತನ ಕೂಡ ಇದೆ.

*

## ಸಾವಿರ ಕಣ್ಣಿನ ನವಿಲು: ಕೃಷ್ಣಮೂರ್ತಿ ಬಿಳಿಗೆರೆ

(ಬಿಳಿಗೆರೆ ಪ್ರಕಾಶನ, ಬಿಳಿಗೆರೆ; ೧೯೯೦)

'ಸಾವಿರ ಕಣ್ಣಿನ ನವಿಲು' ಮೂಲಕ ಕೃಷ್ಣಮೂರ್ತಿ ಬಿಳಿಗೆರೆಯವರು ಅನೇಕ ಉತ್ತಮ ಕವನ ಕೊಟ್ಟಿದ್ದಾರೆ. ವಾಸ್ತವ ಸಮಾಜದ ಶೋಷಣೆಯ ಸಂವೇದನೆಯೇ ಇಲ್ಲಿಯ ಸ್ಥಾಯಿ. ಆದರೆ ಆ ವಿವರಗಳು ಆಕ್ರೋಶವಾಗಿ, ಕಿರುಚಾಟವಾಗಿ ಬರದೆ, ಭಾವನೆಯ ಕಾವನ್ನು ವಸ್ತುವಿನ ತಾಜಾತನವನ್ನು ಶಕ್ತಿಯುತವಾಗಿ ಚಿತ್ರಿಸುವಲ್ಲಿ ಕವಿ ತನ್ನ ವಿಶಿಷ್ಟತೆಯನ್ನು ತೋರಿದ್ದಾರೆ. ವರ್ತಮಾನದ ಸಂಗತಿಯೇ ಆದರೂ ಅದು ವರ್ತಮಾನ ಪತ್ರಿಕೆಯ ವರದಿಯಾಗುವದಿಲ್ಲ. ಅಭಿವ್ಯಕ್ತಿಯ ವಿನ್ಯಾಸದಲ್ಲಿ ಥಕ್

ಎಂದು ಅರ್ಥವನ್ನು ಹೊಳೆಯಿಸುವ ಒಂದು ಕುಶಲತೆ ಅನೇಕ ಕವನಗಳಲ್ಲಿ ಮೆರೆದಿದೆ ಆದ್ದರಿಂದ ಇಲ್ಲಿಯ ಕವಿತೆಗಳು ಮೇಲಕು ಹಾಕುವಂತೆ ಮನಸ್ಸನ್ನು ಸೆಳೆಯುತ್ತವೆ.

'ಸಾವಿರ ಕಣ್ಣಿನ ನವಿಲು,' ಎಂಬ ಹೆಸರು ಒಂದು ಬಗೆಯ ನವೋದಯದ–ನೆನಪನ್ನು ತರುತ್ತದಾದರೆ ಕವಿತೆಯನ್ನು ಓದಿದ ಮೇಲೆ ಅದರ ವ್ಯಂಗ್ಯಾರ್ಥ ಮನಸ್ಸನ್ನು ಗಾಢವಾಗಿ ಮುತ್ತಿಕೊಳ್ಳುತ್ತದೆ ಸಂಕಲನದಲ್ಲಿ ಅತಿ ಮುಖ್ಯ ಕವನ ಕೂಡ ಇದೇ. ಈ ನವಿಲು ಆಕಾಶದಲ್ಲಿ ಮುಗಿಲ ಹಿಂಡು ಕಂಡು ಕುಣಿಯುವದಿಲ್ಲ

"ಸಾವಿರ ಕಣ್ಣಿನ ನವಿಲು ನಗುತ್ತೆ,
ಬೆಂಕಿಯಲಿ ಬೆಂದ
ರಕ್ತದಲಿ ನೆಂದ, ಜೋಕುಗಳು ಸಿಕ್ಕಾಗ
ಇದು ಅಳುತ್ತೆ ಕೂಡ
ಕಣ್ಣು ಕಾಣುವ ಉರಿ
ಏನನ್ನೂ ಸುಡದೆ ವ್ಯರ್ಥವಾದಾಗ"

ಇದರ ಕಣ್ಣಾದರೂ "ಯುರೆನಿಯ ಉಂಡೆಗಳು

'ನಗರ'ದ ಕಾಂಕ್ರೀಟ ರೋಡುಗಳು ನರನಾಡಿಗಳಾಗಿವೆ. ಭಾಷೆ ಬಿಲ್ಡಿಂಗದಾಗಿದೆ. ಇಲ್ಲಿ ದುಡ್ಡಿದ್ದವರು ಸ್ವಿಚ್ ಒತ್ತಿದರೆ ಮಾತುಗಳ ದನಿಗಳೆಲ್ಲ ಬದಲಾಗುತ್ತವೆ. ಇಲ್ಲಿ 'ಯಾರು ಯಾರಿಗೂ ಗುರ್ತು ಸಿಕ್ಕುವುದಿಲ್ಲ. ಇಲ್ಲಿ ಯಾರಿಗೂ ಗುರ್ತು ಸಿಕ್ಕುವುದು ಬೇಕಾಗಿಲ್ಲ. ಯಾಕೆಂದರೆ ಎಲ್ಲರೂ ವೇಷ ತೊಟ್ಟಿದ್ದಾರೆ. ತಲೆಯೊಳಗೆ ಹಾವುಗಳು. ಕಾಲ ಕೆಳಗೆ ಬೆಂಕಿ' ಈ ಚಿತ್ರಣ ನಗರದ ರಾಕ್ಷಸತೆಯನ್ನು ಮಾತ್ರವಲ್ಲ ಕ್ರೌರ್ಯವನ್ನೂ ಸೊಗಸಾಗಿ ಚಿತ್ರಿಸುತ್ತವೆ. ಆದರೆ ಈ ನಗರದ ಒಡಲಿಂದಲೇ ಹೊಸ ಶಕ್ತಿಯೊಂದು ಮೂಡಿ ಬರುವ ಚಿತ್ರ ಇದ್ದಿದ್ದರೆ ಕವಿತೆಗೆ ಹೊಸದೊಂದೇ ಆಯಾಮ ಸಿಕ್ಕುತಿತ್ತು.

*

## ರಿಪೇರಿಯಾಗದಿರುವವ : ಮ. ರಾಮಕೃಷ್ಣ

(ಸುಮಿತ್ರ ಪ್ರಕಾಶನ, ಮೈಸೂರು; ೧೯೮೦)

'ರಿಪೇರಿಯಾಗದಿರುವವ' ಸಂಗ್ರಹದಲ್ಲಿ ೨೩ ಕವನಗಳಿವೆ. ಈ ಕವನಗಳು ಲೇಖಕರ ಸಾಮಾಜಿಕ ಚಿಂತನೆಗೆ ಒಡೆದ ಎರಡು ಟಿಸಿಲುಗಳಂತೆ ಆಕಾರ ಪಡೆದಿವೆ. ಮೊದಲನೇ ಪ್ರಕಾರವೆಂದರೆ ಚಿಂತನಪರ, ಅಂದರೆ ಗಂಭೀರ; ಅಭಿವ್ಯಕ್ತಿ ಎರಡನೇ ಪ್ರಕಾರ ವಿಡಂಬನೆ.

ಚಿಂತನೆಯ ಸ್ವರೂಪ ಮತ್ತು ಅದರ ಮೂಲಭೂತ ಗುಣಗಳನ್ನೂ ಪಡೆದ ಕವಿತೆಯೆಂದರೆ ಪುಸ್ತಕದ ಹೆಸರಿನ ಕವಿತೆಯಾದ 'ರಿಪೇರಿಯಾಗದಿರುವವ'. ಈ ಕವಿತೆ ಲೇಖಕರ ಸಾಮರ್ಥ್ಯವೆಲ್ಲವನ್ನೂ ಪ್ರತಿನಿಧಿಸುವಂತಿದೆ. ಒಬ್ಬ ಲೇಖಕನ ಜನಪರವಾದ ನಿಲುವನ್ನು ಅರ್ಥಪೂರ್ಣವಾಗಿ ಸಾಧಿಸುವ ಮಹತ್ವದ ಕವಿತೆಯ ಸಾಲಿನಲ್ಲಿ ಈ ಕವಿತೆ ನಿಲ್ಲಲು ಪೈಪೋಟಿ ನಡೆಸಲರ್ಹವಾಗಿದೆ.

ಮೊದಲ ಭಾಗದಲ್ಲಿ ಛಾಡಿಗೆಯಲ್ಲಿ ಇದ್ದವ ರಿಪೇರಿಯವನೊಡನೆ ಛತ್ರಿ ದುರಸ್ತಿ ಮಾಡಿಸಿಕೊಂಡಿದ್ದ. ಎರಡನೇ ಭಾಗದಲ್ಲಿ ಛಾಡಿಗೆಯವ ಬಂಗಲೆ ಕಟ್ಟಿದ್ದಾನೆ, ಆದರೆ ರಿಪೇರಿಯವ ಇನ್ನೂ ಬಡವನಾಗಿದ್ದಾನೆ, ನಾಡಿನ ಪ್ರಗತಿ ಎಲ್ಲಿ ಸೇರಿತು ಮತ್ತು ಬಡತನ ಎಲ್ಲಿ ಆಶ್ರಯ ಪಡೆಯಿತು ಎಂಬುದನ್ನು ಸೂಕ್ಷ್ಮವಾಗಿ ಹೇಳುತ್ತಾರೆ. ಕೊನೆಯ ಭಾಗದಲ್ಲಿ ಈ ವ್ಯತ್ಯಾಸಗಳ ಬಗ್ಗೆ ಕರಗಿದ ಮನದ ಒಂದು ನೋಟವಿದೆ. "ಹರಿದ ಕೊಡೆಗಳಿಗೆ ಹೊಸ ಬಟೆ ಹೊದಿಸಿ ಚಂದಿಯುಟ್ಟವನ ಬಗ್ಗೆ, ಹಳೆಯ ಬ್ಯಾಟರಿಗೆ ಬೆಳಕು ನೀಡಿ ಕತ್ತಲೆಯಲ್ಲುಳಿದವನ ಬಗ್ಗೆ". ಮುಂದಿನೆರಡು ಸಾಲು ಅರ್ಥವನ್ನು ಸಡಿಲುಗೊಳಿಸುವಂತಿದೆ. 'ಮುಂಜಾನೆ-ಮಧ್ಯಾಹ್ನ-ಮುಸ್ಸಂಜೆ' ಕವಿತೆ ತನ್ನ ಮುಗಿತಾಯದ ಮೂರನೇ ಭಾಗದಿಂದ ಹೊಸತನವನ್ನು ಹೊಂದಿದೆ. ಬಾಲ್ಯ, ತಾರುಣ್ಯದ ಅಬ್ಬರವನ್ನು ಕಳೆದು ಮುದಿತನದ ಗೋಗರೆಯುವಿಕೆಯಲ್ಲಿ ಈ ಕವನ ಅಂತ್ಯವಾಗದೆ "ಸಂಜೆ ಕಾಲೆಳೆದುಕೊಂಡು ಬರುವಾಗ ಮಗ ರವಿಯ ಚಪ್ಪಾಳೆ ಸ್ವಾಗತ" ಅವನನ್ನು ಸ್ವಾಗತಿಸುವುದು, ಅದೇ "ಆಕಾಶದಲ್ಲಿ ಹಾಲು ಚೆಲ್ಲುತ್ತ ಚಂದ್ರೋದಯ"ವಾಗುವುದು ಬದುಕಿನ ಕುರಿತು ಲೇಖಕನ ಚಿಂತನೆ ಇಲ್ಲಿ ಹೃದ್ಯವಾಗಿ ಕಿನೆ ಕಟ್ಟಿದೆ. 'ರಾತ್ರಿಗಳನ್ನು ಪ್ರೀತಿಸುವವರು' ಎನ್ನುವುದು ಕಾರಖಾನೆಯ ಕಾರ್ಮಿಕರ ಜೀವನವನ್ನು ನಿರೂಪಿಸುತ್ತದೆ. ಕಾರ್ಮಿಕ ಹಾಗೂ ಕಾರಖಾನೆಯ ಮಾಲಿಕರ ವೈರುಧ್ಯಮಯ ವಾಸ್ತವವನ್ನು ಶಕ್ತಿಯುತವಾಗಿ ಸೆರೆಹಿಡಿದಿದ್ದಾರೆ. 'ಜಗತ್ತಿನಲ್ಲಿ ಹಗಲು ಪ್ರಿಯರಿದ್ದಾರೆ ರಾತ್ರಿಗಳನ್ನು ಪ್ರಿತಿಸುವವರಿದ್ದಾರೆ, ಫಾಕ್ಟರಿಯ ಜನಗಳಿಗೆ ಎರಡೂ ಪ್ರಿಯವಲ್ಲ' ಎಂಬ ಸಾಲು ಸಾಮಾನ್ಯದಿಂದ ಅಸಮಾನ್ಯವನ್ನು ಧ್ವನಿಸುವ ರೀತಿಯದಾಗಿದೆ.

ಕಾನ್ವೆಂಟ ಶಿಕ್ಷಣ. ವಿ.ವಿ.ಗಳು ಮತ್ತು ಪದವೀಧರರು ನಮ್ಮ ಅಪಕ್ವ ವಿದ್ಯಾಭ್ಯಾಸದ ಪರಿಣಾಮವನ್ನು ವಿಡಂಬಿಸಿದರೆ, 'ನಮ್ಮ ನಡುವಿನ ನೆಪೋಲಿಯನ್' ಪ್ರಸ್ತುತ ಭಾರತದ ಪ್ರಜಾಪ್ರತಿನಿಧಿಗಳ ಬಗ್ಗೆ ತೀಕ್ಷ್ಣ ವಿಡಂಬನೆ ಆದರೆ ವಾಸ್ತವ ಸಂಗತಿಗಳಾಗಿವೆ.

ಇಂದಿನ ವಾಸ್ತವಕ್ಕೆ ಕವಿ ವ್ಯಗ್ರವಾಗಿದ್ದಾರೆ. ಎಲ್ಲಿ ಹೆಣ್ಣು ನಲಿಯುತ್ತಾಳೊ ಅಲ್ಲಿ ಮನೆ ನಲಿಯುತ್ತಾಳೆ ಎಂಬ ಆರ್ಯೋಕ್ತಿಯನ್ನು ಹೊಂದಿಯೂ ನಾರಿಯರನ್ನು

ನರಕಯಾತನೆಗೆ ದೂಡಿದ ಸಮಾಜ, ಆರ್ಥಿಕ ಶೋಷಣೆ, ರಾಜಕೀಯದಲ್ಲಿಯ ಹಾದರ ಹೀಗೆ ವರ್ತಮಾನದ ತಪ್ತ ಸಮಾಜವೇ ಕಾವ್ಯದ ವಸ್ತುವಾಗಿದೆ.

ವಸ್ತುವನ್ನು ಪ್ರಸ್ತುತಪಡಿಸುವಲ್ಲಿ ಸಾರಿ ಸಾರಿ ಹೇಳುವ ಚಪಲತೆಗಿಂತ ಅದಕ್ಕೆ ಪ್ರತಿಮೆ ರೂಪಕಗಳ ಒಡ್ಡು ಕಟ್ಟಿ ಪ್ರವಾಹ ಒತ್ತಡ ಜಾಸ್ತಿಯಾಗುವಂತೆ ಮಾಡಿರುವುದು ಕವಿಯ ಹೆಚ್ಚಳವಾಗಿದೆ.

ಕವಿಯು ತನ್ನ ಅನುಭವವನ್ನು ಸ್ಫುಟವಾಗಿ ಅಭಿವ್ಯಕ್ತಿ ಪಡಿಸಲು ಭಾಷೆಯನ್ನು ಹದಗೊಳಿಸುವಲ್ಲಿ ಹೆಚ್ಚಿನ ಲಕ್ಷ್ಯ ಕೊಟ್ಟಿರುವುದು ಎಲ್ಲಾ ಕವನಗಳಲ್ಲಿ ಕಂಡು ಬರುತ್ತದೆ.

ಆರ್. ವಿ. ಭಂಡಾರಿ

ಜಿ. ಕೆ. ಶ್ರೀನಿವಾಸರಾವ್

---

## ತೇನ ವಿನಾ..

"ತೇನ ವಿನಾ
ತೃಣಮಪಿ ನಚಲತಿ"
ಎಂಬ ಸಿದ್ಧಾಂತಕ್ಕೆ
ಮೊರೆ ಹೊಕ್ಕ ನಾನು

ನಾನು ಕುಡಿದು ತೂರಾಡಿದರೆ
ಅದಕೆ ನಿನ್ನದೇ ಪ್ರೇರಣೆ
ಎಂದು ನಾನಂದರೆ

ನಿನ್ನೊಪ್ಪಿಗೆ
ಇಂದಿರುವುದು ಸಾಧ್ಯವೇ ?
ಹೇಳು ಪುರುಷೋತ್ತಮನೇ,
ಇದಕಾರು ಹೊಣೆ ?

# ಸಂಕ್ರಮಣ ಸಾಹಿತ್ಯ

## ಮೂರು ಸಂಪುಟಗಳು

### ಸಂಪಾದಕ : ಚಂದ್ರಶೇಖರ ಪಾಟೀಲ

### ಸಂಪುಟ ೧ : ಸಾಹಿತ್ಯ ಸೃಷ್ಟಿ-ಸಾಹಿತ್ಯ ವಿಮರ್ಶೆ

## ಸಂಪುಟ ೨ : ಪ್ರಗತಿಶೀಲ-ನವ್ಯ-ದಲಿತ-ಬಂಡಾಯ

## ಸಂಪುಟ ೩ ಸಮಕಾಲೀನ ಸಾಂಸ್ಕೃತಿಕ ಚರ್ಚೆಗಳು

| | |
|---|---|
| ಸಂಸ್ಕೃತಿ ಕ್ರಾಂತಿಗೆ ಕಹಳೆ ನಾಂದಿ | ಕುವೆಂಪು |
| ಕರ್ನಾಟಕ ಸಂಸ್ಕೃತಿ ವಿಶ್ಲೇಷಣೆ | ಪೂರ್ಣಚಂದ್ರ ತೇಜಸ್ವಿ |
| ಮಾನವೀಯತೆ ಅಂತಾರಲ್ಲ ಅದರ ಬಗ್ಗೆ | ದೇವನೂರ ಮಹಾದೇವ |
| ವರ್ಣ ವ್ಯವಸ್ಥೆಯ ಕರಾಳ ಮುಖಗಳು | ಎಸ್. ಶಿವಾನಂದ |
| ಗೊಡ್ಡು ಬ್ರಾಹ್ಮಣ್ಯ ಮತ್ತು ಧೂರ್ತ ಚಾರ್ವಾಕ ಮತ | ಭಗವಾನ |
| ವಿಚಾರವಾದ ಮತ್ತು ಚಾರ್ವಾಕ | ಮೀರಾ ಚಕ್ರವರ್ತಿ |
| ಭಾರತೀಯ ಸಂಸ್ಕೃತಿ : ಅಂತರಂಗ ಬಹಿರಂಗ | ಪೋಲಂಕಿ ರಾಮಮೂರ್ತಿ |
| ಇಂಡಿಯಾದ ಇಷ್ಟದೇವತೆಗಳ ಭಾನಗಡಿ | ಕುಂ. ವೀರಭದ್ರಪ್ಪ |
| ಧರ್ಮ ಮತ್ತು ಮಹಿಳೆ | ಸಾರಾ ಅಬೂಬಕ್ಕರ |
| ನಮಗೆ ಬೇಕಾದ ಧರ್ಮ ಯಾವುದು ? | ಹಿ. ಶಿ. ರಾಮಚಂದ್ರೇಗೌಡ |
| ಪಾವಿತ್ರ್ಯನಾಶವೂ ಪ್ರತಿ ಸಂಸ್ಕೃತಿ ನಿರ್ಮಾಣವೂ | ರಹಮತ ತರೀಕೆರೆ |

— — — —

- ಪ್ರತಿಯೊಂದು ಸಂಪುಟದ ಬೆಲೆ ರೂ. ೪೦.
- **ಸಂಪುಟ : ಒಂದು** ಈಗಾಗಲೇ ಪ್ರಕಟವಾಗಿದೆ.
- **ಸಂಪುಟ : ಎರಡು** ಮತ್ತು **ಸಂಪುಟ : ಮೂರು** ಈಗ ಅಚ್ಚಿನಲ್ಲಿವೆ ೧೯೯೩ ಡಿಸೆಂಬರ ಕೊನೆಯೊಳಗಾಗಿ ಹೊರಬರಲಿವೆ. ಹಣವನ್ನು ಸಂಕ್ರಮಣ ಪ್ರಕಾಶನದ ಹೆಸರಿನಲ್ಲಿ ಡಿ. ಡಿ. / ಎಂ. ಓ. ಮೂಲಕ ಕಳಿಸಬೇಕು.

## ಮಾರಾಟಕ್ಕೆ ಲಭ್ಯವಿರುವ ಇತರ ಕೃತಿಗಳು

| | |
|---|---|
| ಕನ್ನಡ ಲೇಖಕರ ವಿಳಾಸಗಳು | ೩೬—೦೦ |
| ಹನ್ನೊಂದು ಕಥೆಗಳು : ಕಮಲ ಹೆಮ್ಮಿಗೆ | ೨೫—೦೦ |
| ಇದಿಷ್ಟೇ ಸತ್ಯ : ರಾಮ ಜಾಧವ | ೧೦—೦೦ |
| ನರಬಲಿ : ಬಸವರಾಜ ಸಬರದ | ೧೨—೦೦ |
| ಅಂಬೇಡ್ಕರರ ಹೋರಾಟದ ಪರಿಕಲ್ಪನೆ : ದಯಾನಂದ ಮಾನೆ | ೫—೦೦ |
| ನ್ಯಾಯ : ಕೋರಗಲ್ ವಿರೂಪಾಕ್ಷಪ್ಪ, | ೧೫—೦೦ |

**ಸಂಕ್ರಮಣ ಪ್ರಕಾಶನ ಧಾರವಾಡ ೫೮೦೦೦೧**

## ಈ ಸಂಚಿಕೆಯ ಲೇಖಕರು

**ಜಿ ಭಾಸ್ಕರ ಮಯ್ಯ** ಹಿಂದಿ ಪ್ರಾಧ್ಯಾಪಕ, ಭಂಡಾರಕರ ಕಾಲೇಜು ಕುಂದಾಪುರ ೫೭೬ ೨೦೧ **ಟಿ. ಆರ್. ಚಂದ್ರಶೇಖರ** ಮ. ನಂ. ೨, ಪುರಸಭೆ ಹಿಂಭಾಗ, ಅಮರಾವತಿ, ಹೊಸಪೇಟೆ ೫೮೩ ೨೦೧ **ಗೌ. ಮ. ಉಮಾಪತಿ ಶಾಸ್ತ್ರಿ** ನಿರ್ದೇಶಕ, ಶ್ರೀ. ಮಂ. ಸಂಸ್ಕೃತಿ ಸಂಶೋಧನ ಪ್ರತಿಷ್ಠಾನ, ಧರ್ಮಸ್ಥಳ ೫೭೪ ೨೧೬ **ಡಾ. ಪಂಚಾಕ್ಷರಿ ಹಿರೇಮಠ** ಜಯನಗರ, ಸಪ್ತಾಪುರ, ಧಾರವಾಡ ೫೮೦ ೦೦೧ **ಡಾ. ಪ್ರಹ್ಲಾದ** ಮುದಗೆಲ್ಲ ಇ-೨, ಶ್ರದ್ಧಾ ಮಾತಾ ಪೊವಾಯಿ, ಮುಂಬೈ ೪೦೦ ೦೭೬ **ಆರ್. ವಿ. ಭಂಡಾರಿ** ಅರೆ ಅಂಗಡಿ (ಉ. ಕ.) ೫೮೧ ೪೩೦

**ಕಮಲ ಹೆಮ್ಮಿಗೆ** ೫೧, ಆಶೀರ್ವಾದ, ಶಿವಗಿರಿ, ಧಾರವಾಡ ೫೮೦ ೦೦೭ **ಹಿ. ಮ. ಗುರುಬಸವರಾಜ** ಪ್ರಿನ್ಸಿಪಾಲ, ಶ್ರೀ. ಉ. ಜಿ. ಸಿ, ಪ. ಪೂ. ಕಾಲೇಜು, ಇಟ್ಟಗಿ (ಬಳ್ಳಾರಿ) ೫೮೩ ೨೨೦ **ಶಿವರಾಮಯ್ಯ** ಅಮ್ಮಾಜಿ, ನಂ. ೧೨೧, ೧೩ ನೇ ಮೇನ್, ಬಿನ್ನಿ ಲೇಔಟ, ವಿಜಯನಗರ, ಬೆಂಗಳೂರು ೫೬೦ ೦೪೦ **ಹನುಮಂತ ಪಾಟೀಲ** ಮಲಪ್ರಭಾ ಗ್ರಾಮೀಣ ಬ್ಯಾಂಕು, ಗಜೇಂದ್ರಗಡ ೫೮೨ ೧೧೪ **ಲೀಲಾ ಕಲಕೋಟಿ** ವಿದ್ಯಾಚೇತನ, ನವೋದಯ ನಗರ, ಧಾರವಾಡ ೫೮೦ ೦೦೩ **ಡಿ ಎನ್. ಅಕ್ಕಿ** ಚಿತ್ರಕಲಾ ಶಿಕ್ಷಕ, ಗೋಗಿ (ಗುಲಬರ್ಗ) ೫೮೫ ೩೦೯ **ಪಿ. ಮಂಜುನಾಥ** ಕೇರಾಫ್ ಪಿ, ರಾಜು, ಪ್ರಧಾನ ಅಂಚೆ ಕಚೇರಿ, ತಿಪಟೂರು ೫೭೨ ೨೦೧ **ಜಿ. ಪರಮೇಶ್ವರ ಕತ್ತಿಗೆ** ರಾಘವೇಂದ್ರ ನಿಲಯ, ಕುಂಬಾರ ಬೀದಿ, ಹರಿಹರ ೫೭೭ ೬೦೧ **ಜೆ. ಕೆ. ಶ್ರೀನಿವಾಸರಾವ** ತುಂಗಭದ್ರಾ ಗ್ರಾಮೀಣ ಬ್ಯಾಂಕ, ಆನೆ ಹೊಸೂರು (ರಾಯಚೂರು) ೫೮೪ ೧೨೨

---



---



## CENTRAL SAHITYA AKADEMI
(Some recent publications in Kannada)

Bhasa by V. Venkatachalam. Tr. K. Krishnamurthy Rs. 45

Katthale[illegible]da Kagatthalige (Punjabi novel) by Narendrapal Singh, Tr. P. Shashikala Rs. 40

Janapada Geethanjali (Kannada folk songs) Comp. by D. Javare Gowda Rs. 25

Kempu Meenu (Malayalam novel) by Thakazhi Sivasankara Pillai Tr. N. Kasturi Rs. 30

Janapada Mattu Girijanara Kathegalu Comp. by L. R Hegde Rs. 65

Yugantha (Marathi classic) by Dr. Iravati Karve Tr. Saraswathi Gajanan Risbud Rs. 30

Shakti Vaidya by T. Janakiram, Tr. Seshanarayana Rs. 80

MAKERS OF INDIAN LITERATURE SERIES: (each Rs. 15)

Premchand by Prakash Chandra Gupta, Tr. S. K. Desai-Iswarchandra Vidyasagar by Hirinmay Bannerjee, Tr. P. Naregal-Ghalib by Mujeeb, Tr. Panchakshari Hiremath-Tarashankar Bandyopadhyay by Mahasveta Devi. Tr. Vijaya-Kalhana by Somnath Dhar. Tr. Bannanje Govindacharyulu-Buddhadeva Bose by Alokernjan Dasgupta, Tr. Ramachandra Sharma-Sriranga by N. K. Kulkarni-Tiruvlluvar by R. S. Maharajan, Tr P. S, Srinivasa-H. N. Apte by R. B. Joshi, Tr. N. S. Gadagkar-Radhanatha Ray by Gopinatha Mohanty, Tr. S. Nadiga-Raja Ramamohana Roy by Saumyendranath Tagore Tr. M. Rama Rao-Rahul Sankrityayan by Prabhakara Machwe. Tr. Lakshminarayana Aurora-V[illegible] Narayana Menon by B Hridayakumari Tr. K V. Nar[illegible]y M. G Deshmuke, Trs. Jayathirth Rajpurohit and S[illegible]r Prasad by Rameshchandra shah, Tr. S. Pattanashetty-Phaneeswaranatha Renu by Surendhra Choudhary Tr H S. Parvathi-Namakkal Ramalingam Pillai by K. R. Hanumanthan Tr. V. Gopalakrishna-Yashpal by Kamala Prasad Tr. H. V. Ramachandra Rao-Shishunala Shariff Sahebaru by Shivanand Gubbannavar-Baba Farid by Balwant Singh Anand Tr. Chenaveera Kanavi Pammal Sampanda Mudaliar by A. N. Perumal Tr. K. Jayaraman

SAHITYA AKADEMI

New Delhi 1 Calcutta 53 Bombay 14 Bangalore 2 Madras 1

Southern Regional Oifice. 109, J. C. Road

Bangalore 560002

Phone 221412